ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ **ತ್ರಿವಿಧ ದಾಸೋಹ ಮೂರ್ತಿಗಳಾದ**
ಪರಮ ಪೂಜ್ಯ ಡಾ|| ಶ್ರೀ ಶ್ರೀ **ಶಿವಕುಮಾರಸ್ವಾಮಿಗಳವರ**

# " ವಜ್ರಮಹೋತ್ಸವ ನಿಧಿ ಸಮಿತಿ ".

" ಶಿವಪಥವನರಿವಡೆ ಗುರುಪಥವೇ ಮೊದಲು "

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾ
60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ
ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

**ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :**
**4 ಕೋಟಿ ರೂಗಳ ವೆಚ್ಚದಲ್ಲಿ**
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
**ಮತ್ತು**
**ಬೃಹತ್ ಪ್ರಸಾದ ನಿಲಯ.**
(**16-2-92**) ರಂದು

ಭಾರತದ ರಾಷ್ಟ್ರಪತಿ ಡಾ|| ಶ್ರೀ ಶಂಕರದಯಾಳ ಶರ್ಮ ಮತ್ತು
ಲೋಕಸಭಾಧ್ಯಕ್ಷ **ಶ್ರೀ ಶಿವರಾಜ್ ಪಾಟೀಲ್** ಇವುಗಳ ಶಿಲಾನ್ಯಾಸವನ್ನು
ನೆರವೇರಿಸಿದ್ದಾರೆ.

5/-, 10/-, 25/-, 51/-, 101/-, 201/-, 501/-, 1001/
5001/-, 10,001/-, 35,000 ರೂ.ಗಳ ಕೂಪನ್‌ಗಳು ನಿಧಿ
ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು,
ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ
ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,

**ಎಸ್. ಎಸ್. ಹಸಬಿ,**
ಕಾರ್ಯದರ್ಶಿಗಳು.

**ಪದ್ಮಭೂಷಣ ಡಾ|| ಎಂ. ಸಿ. ಮೋದಿ,**
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ.
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104.

# ಸಿದ್ಧಗಂಗಾ

ಸಂಪುಟ-30. ಸಂಚಿಕೆ-6. ಜೂನ್-1993.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಅಪಘಾತ ಅಪಮೃತ್ಯು ಮುಟ್ಟವು ಸ್ಮರಿಸಿದರೆ
ತವಪಾದ ನಿರುತದಲಿ ನನ್ನ ತಂದೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ನೀನಿರ್ಪತಾಣದಲಿ ಹಾವು ಕಚ್ಚದು ತಂದೆ
ನೀನಿರ್ಪತಾಣದಲಿ ಸುಡದು ಬೆಂಕಿ। ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಸಿಡಿಮದ್ದು ಕೈಬಾಂಬು ಹುಸಿಯಾಗುವುವು ತಂದೆ
ಅಡಿಗಡಿಗೆ ತವಪಾದ ಸ್ಮರಿಸಿದರೆ। ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

⁂ + ⁂ ÷ ⁂

—ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ

ಒಂದು ಬಾರಿ ಕ್ಷಾಮ ಬಂದ ವರ್ಷ. ಜನತೆಯೆಲ್ಲಕಂಗಾಲಗೊಂಡಿದ್ದರು. ದನ ಕರುಗಳಿಗೂ ಕುಡಿವ ನೀರಿಗೆ ಅಭಾವವಾಗಿತ್ತು. ಶ್ರೀ ಮಠದಲ್ಲಿ ದಾಸೋಹ ನಡೆದಿತ್ತು. ಸುತ್ತ ಹಳ್ಳಿಯ ಬಡ ಜನ ನಿತ್ಯ ಪ್ರಸಾದದ ವೇಳಿಗೆ ಶ್ರೀ ಮಠಕ್ಕೆ ಬರುತ್ತಿದ್ದರು. ಹತ್ತಾರು ಸಾವಿರ ಸಂಖ್ಯೆಯಲ್ಲಿ ಬರುತ್ತಿದ್ದರು. ಮಠದಲ್ಲಿ ವಾಸಮಾಡುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ನಾಲ್ಕೈದು ಸಾವಿರವಾಗಿತ್ತು. ಪ್ರತಿ ನಿತ್ಯ ದಾಸೋಹ ನಡೆಯಲೇ ಬೇಕಾಗಿತ್ತು. ಅದು ಶ್ರೀ ಗುರು ಸಂಕಲ್ಪ. ಶ್ರೀ ಮಠದ ಸತ್ಪರಂಪರೆಯ ದೀಕ್ಷೆ ಪ್ರಸಾದಕ್ಕೆ ಬರುತ್ತಿದ್ದ ಭಕ್ತಾದಿಗಳಿಗೆ - ಬಡ ಜನತೆಗೆ ಪ್ರಸಾದ ನೀಡದೆ ಕಳುಹಿಸುವಂತಿಲ್ಲ. ಶಿವಸಂಕಲ್ಪ ಏನಿದೆಯೋ ಏನೋ ಎಂದು ಕೊಂಡು ಸೇವಾಮಣಿಹವನ್ನು ನಡೆಸಬೇಕಾಗಿತ್ತು. ಹೀಗಿರುವಾಗ ತುಮಕೂರು ನಗರದ ಅಭಿಮಾನಿ ವರ್ತಕ ಬಂಧುಗಳು ಕೆಲವರು ಒಂದು ದಿನ ಶ್ರೀಮಠಕ್ಕೆ ಬಂದರು. ಹತ್ತಾರುಮಂದಿ ಪ್ರಮುಖರೇ ಬಂದಿದ್ದರು ಅವರೆಲ್ಲ ಲೋಕಾನುಭವಿಗಳಾಗಿದ್ದರು. ವ್ಯವಹಾರ ಕುಶಲಿಗಳಾಗಿದ್ದರು. ಸಂಸ್ಥೆಯ ಸೇವಾ ಕಾರ್ಯದಲ್ಲಿ ಸಹಕಾರಿಗಳಾಗಿದ್ದರು. ‘ ಏನು ಬಂದದ್ದು ’ ಎಂದು ಕೇಳಲಾಗಿ “ ಬುದ್ಧೀ ಮೊದಲು ಪೂಜೆಯಾಗಲಿ. ನಿಧಾನವಾಗಿ ಮಾತನಾಡೋಣ ಎಂದರು ” ‘ ಆಗಲಿ” ಎಂದು ಪೂಜೆ ಪ್ರಸಾದ ಮುಗಿಸಿ ಕೊಂಡು, ಬಂದವರೆಲ್ಲ ಪ್ರಸಾದವಾದ ನಂತರ ಸಮಾಲೋಚನೆಗಾಗಿ ಕಾರ್ಯಾಲಯದಲ್ಲಿ ಸೇರಿದ್ದಾಯಿತು. “ ಈಗ ಹೇಳಿ ಏನು ವಿಚಾರ ? ’ ಎಂದು ಕೇಳಲಾಗಿ, ‘ ಬುದ್ಧೀ ದೇಶಕ್ಕೆ ಕ್ಷಾಮ ಬಂದಿದೆ. ಕುಟುಂಬಗಳನ್ನು ನಿರ್ವಹಿಸುವುದೇ ದುಸ್ತರವಾಗಿದೆ. ಹೀಗಿರುವಾಗ ಮಠದಲ್ಲಿ ದಾಸೋಹದ ವೇಳೆಗೆ ಹತ್ತಾರು ಸಾವಿರ ಜನ ಪ್ರಸಾದಕ್ಕಾಗಿ ಬರುವುದನ್ನು ಕಂಡು ನಾವೆಲ್ಲ ಒಂದು ಮಾತನ್ನು ಬಿನ್ನವಿಸಿಕೊಳ್ಳಲು ಬಂದಿದ್ದೇವೆ ? ಎಂದರು. “ಹೇಳಿ” ಎನ್ನಲು ಮಠದಲ್ಲಿರುವ ವಿದ್ಯಾರ್ಥಿಗಳಿಗೆ ದಾಸೋಹ ನಡೆಯಲಿ. ಹೊರಗಿನಿಂದ ಬರುವ ಜನಗಳಿಗೆ ಕೊಂಚ ಕಾಲ-ಕ್ಷಾಮ ಬಗೆ ಹರಿಯುವವರೆಗಾದರೂ ದಾಸೋಹ ನಿಲ್ಲಿಸಿ” ಎಂದರು. ಅವರ ಮಾತಿನಿಂದ ಅವರಿಗೆ ಸಂಸ್ಥೆಯ ಮೇಲಿರುವ ಅಭಿಮಾನ, ಸಂಸ್ಥೆಯ ಹಿರಿಮೆಯ ಬಗ್ಗೆ ಇರುವ ಕಳಕಳಿ ಎದ್ದು ಕಾಣುತ್ತಿತ್ತು. ಕ್ಷಣಕಾಲ ಹೃದಯ ತುಂಬಿ ಬಂತು. ಶ್ರೀಮಠದ ಪ್ರಸಾದದ ಪರಿಣಾಮ ಇದಲ್ಲವೆ ಎನಿಸಿತು. ಆದರೆ ಅನಿವಾರ್ಯವಾಗಿ ಹೇಳಬೇಕಾಯಿತು. “ ನಿರಂತರ ನಡೆದಿರುವ ದಾಸೋಹವನ್ನು ನಿಲ್ಲಿಸುವುದಕ್ಕೆ ಯೋಚಿಸುವುದಾಗಲಿ, ಪ್ರಯತ್ನಿಸುವುದಾಗಲಿ ಏಕೆ ಶ್ರೀ ಗುರುಕೃಪೆ ನಡೆಸುವತನಕ ತಾನೇ ನಡೆದಿರುತ್ತದೆ. ಇಲ್ಲವಾದರೆ ಇಲ್ಲ. ಅಲ್ಲವೆ ?” ಎನ್ನಬೇಕಾಯಿತು. ಬಂದವರೆಲ್ಲ ಮರಳಿದರು. “ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ” ಭಗವಾನ್ ಬಸವಣ್ಣನವರ ಮಾತು ನೆನಪಿನಾಳದಲ್ಲಿ ಮಿಡಿಯುತ್ತಿತ್ತು.

# ಶಿವಶರಣರು

ಚನ್ನಬಸವದೇವರು, ಅಥಣಿ, ಜೆ.ಎಸ್.ಎಸ್. ಗುರುಕುಲ, ರಾಮಾನುಜರಸ್ತೆ,
ಮೈಸೂರ–4

ಶ್ರದ್ಧೆ ಸಾಧನೆ ಸಿದ್ಧಿ ಶುದ್ಧ ಶಾಂತಿಯ ತತ್ವ
ವೇದ ಪುರಾಣಗಳ ಉಪನಿಷತ್ತಿನ ಸತ್ವ
ವಚನ ರೂಪವ ತಾಳಿ ಸತ್ಯದಾಚಾರ್ಯತ್ವ
ಅಛಲದಿಂ ಪೇಳಿಹರು ಸರ್ವಶಿವಶರಣರು ॥

ಎರಡೆಂಬತ್ತು ಕೋಟಿಗು ಮೀರಿ ವಚನವ ರಚಿಸಿ
ಸಾಹಿತ್ಯ ಸೌಧದ ಮುಕುಟ ಮಣಿ ಎಂದೆನಿಸಿ
ಬಾಹ್ಯಮಂ ಆಂತರಿಕ ಎರಡು ಬಗೆ ತಾವ್ ತಿಳಿಸಿ
ಅವರಿಲ್ಲದೆ ಯಾರು ? ಈ ಕಾರ್ಯಕೆ ಸಾಕ್ಷಿ ॥

ಅರ್ಚನಾರ್ಪಣಭಾವ ನಿತ್ಯ ಸೇವಾಕಾಂಕ್ಷೆ
ಅಂಗಲಿಂಗದ ಸುಖವ ಸವಿಯುವ ಅಪೇಕ್ಷೆ
ಮಾನವೀಯತೆ ಮೌಲ್ಯ ಕಾಯಕದ ಶಿವದೀಕ್ಷೆ
ಸ್ವಾನುಭಾವದ ಶಿಲ್ಪಿ ಶರಣರೇ ಶ್ರೀರಕ್ಷೆ ॥

ಬ್ರಾಂತಿ ಕ್ರಾಂತಿಯು ಮೀರಿ ಶಾಂತಿಸಹನೆ ತೋರಿ
ಭಗವದನುಭವ ಭಕ್ತಿ ಜಗದೆಡೆಯಂ ತಾವ್ ಸಾರಿ
ಶತಮಾನ ಗತಿಸಿದರು ನಶಿಸಲಾರದ ದಾರಿ
ಸತ್ಸಾಧನಾ ಪಥವು ನಮಗಿಂದು ಸುಖಕಾರಿ ॥

ಕಾವ್ಯ ರಚಿಸಲು ಎಂದು ಲೇಖನಿಯ ಹಿಡಿದಿಲ್ಲ
ನರರ ಸ್ತುತಿಗತಿಗಾಗಿ ನಾಲಿಗೆಯ ಮಾರಿಲ್ಲ
ವಚನ ಸಾಹಿತ್ಯಾದಿ ಸರ್ವತತ್ವವ ಪೇಳಿ
ಘನತೆಯಿಂ ಬಾಳಿದರು ಶಿವನರೂಪವ ತಾಳಿ ॥

# ಶ್ರೀ ಸಿದ್ಧಲಿಂಗೇಶ್ವರ ವಚನ

ಅಷ್ಟಾಷಷ್ಠಿ ಕೋಟಿ ತೀರ್ಥವ ಮಿಂದರಿಲ್ಲ ಕಾಣಿರಣ್ಣಾ ।
ಲಕ್ಷಲಕ್ಷ ಕೋಟಿ ಕೋಟಿ ಜಪವನೆಣಿಸಿದರಿಲ್ಲ ಕಾಣಿರಣ್ಣಾ ।
ಧ್ಯಾನ ಮೌನ ಹೋಮ ನೇಮ ಅನುಷ್ಠಾನವ ಮಾಡಿದರಿಲ್ಲ ಕಾಣಿರಣ್ಣಾ ।
ನೂರಿಪ್ಪತ್ತುವೇಳೆ ಭೂಪ್ರದಕ್ಷಿಣವ ಮಾಡಿದರಿಲ್ಲ ಕಾಣಿರಣ್ಣಾ ।
ಕಾಶಿಕೇದಾರ ಶ್ರೀಶೈಲ ಶಿವಗಂಗೆಗೈದಿದರಿಲ್ಲ ಕಾಣಿರಣ್ಣಾ ।
ಇವೆಲ್ಲ ಬರಿಯ ಭ್ರಾಂತು
ಇಪ್ಪಠಾವ ಹೇಳಿಹೆನು ಕೇಳಿರಣ್ಣಾ ।
ಶ್ರೀಗುರು ಕರುಣದಿಂದ ಬಿಜಯಿಸಿ ಕೊಟ್ಟ ಪರಮ ಲಿಂಗ
ತನ್ನ ಕರದಲ್ಲಿ ತುಂಬಿಪ್ಪುದಯ್ಯಾ
ಹಲವು ಕಡೆಗೆ ಹೋಹ ಮನವ ಧ್ಯಾನವೆಂಬ ಹಸ್ತದಲ್ಲಿ ಹಿಡಿದು
ಆ ಲಿಂಗದ ಗೊತ್ತಿನಲ್ಲಿ ಕಟ್ಟಿಗೆರೆಯ ಬಲ್ಲರೆ
ಅಲ್ಲಿಪ್ಪನು ಶಂಭು ಪರಮೇಶ್ವರನು
ಇವೇ ನಿಶ್ಚಯ, ಉಳಿದವೆಲ್ಲ ಹುಸಿ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ।

ದೇವರನ್ನು ಕಾಣಬೇಕೆಂಬ ಉದ್ದೇಶದಿಂದ 98 ಕೋಟಿ ತೀರ್ಥಗಳಲ್ಲಿ ಸ್ನಾನಮಾಡುವವರುಂಟು. ಲಕ್ಷ ಅಥವಾ ಕೋಟಿ ಜಪಗಳನ್ನು ಮಾಡುವವರುಂಟು. ಧ್ಯಾನ, ಮೌನ, ಹೋಮ, ನೇಮ ಅನುಷ್ಠಾನ ಮಾಡುವವರುಂಟು ನೂರಿಪ್ಪತ್ತು ವೇಳೆ ಭೂಮಿಯನ್ನೆಲ್ಲಸುತ್ತಿ ಬರುವವರುಂಟು. ಕಾಶಿ, ಕೇದಾರ, ಮೊದಲಾದ ಕ್ಷೇತ್ರಗಳಿಗೆ ತೆರಳುವವರುಂಟು, ಆದರೆ ಅವೆಲ್ಲ ದೇವರನ್ನು ಕಾಣುವರೋ ? ಎಂಬ ಪ್ರಶ್ನೆಗೆ ಸಮಾಧಾನಕರ ಉತ್ತರ ದೊರೆಯುವುದೆ ಕಠಿಣ. ಯಾಕೆಂದರೆ ತಾನು ಹುಡುಕುವುದು ತನ್ನಲ್ಲಿಯೇ ಇದ್ದಾಗ ಅದನ್ನು ಮತ್ತೆಲ್ಲಿ ಹುಡುಕಿ ಸಾಧ್ಯ ಮಾಡಿಕೊಳ್ಳಲಾದೀತು ? ನಮ್ಮೊಳಗಿರುವ ದೇವರನ್ನು ಗುರುಮೂರ್ತಿಯು ಹೊರಗೆ ತೆಗೆದು ನಮ್ಮ ಕೈಯಲ್ಲಿ ಪೂಜಿಸಲು ದಯಪಾಲಿಸಿರುವನು. ಅದೇ ಲಿಂಗದಲ್ಲಿ ಎಲ್ಲ ಕಡೆಗೆ ಸುಳಿಯುವ ಮನಸ್ಸನ್ನು ಹಿಡಿತಂದು ನಿಲ್ಲಿಸಿದರೆ ಸಾಕು. ದೇವನು ಅಲ್ಲಿಯೇ ಅನುಭವಕ್ಕೆ ಬರುವನು. ಇಂತಹ ದೇವನಲ್ಲಿ ಕೂಡಿ ಸುಖಿಸುವ ಅನಂದಕ್ಕೆ ಎಣೆಯಿಲ್ಲ. ಸುಮ್ಮನೆ ಸುತ್ತಿ ಸುಳಿದು ಕಷ್ಟಪಡುವಲ್ಲಿ ಅರ್ಥವಿಲ್ಲ.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ –ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಕಂಕರ್ಯ ಸೇವಾ ಸಂಘ. ಎಡೆಯೂರು -ಗದಗ)

## ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಡಾ|| ಎಂ. ಎಸ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದಾರ್ಥಿ ಸಂಘ

* * *

ಪ|| ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು

* * *

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

* * *

ಬಿ. ವೀರಭದ್ರಯ್ಯ
ಪಿ. ಎಸ್. ಚಂದ್ರಶೇಖರಯ್ಯ
ಎಂ. ರೇಣುಕಾರಾಧ್ಯ
ಸಂಪಾದಕ ಮಂಡಳಿ

* * *

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ
ಮುದ್ರಕರು

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ

### ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂ ಮಠದಿಂದ ಪ್ರಕಟವಾಗುತ್ತಿರುವ ಮಾ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾ ಸಂಘದ ಹೆಮ್ಮೆಯ ಸೇವಾ ಪುರಸ ಮೇಲಾಗಿ ಶ್ರೀ ಮಠದ ಮುಖಮಾ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮ ಮಹಾಸ್ವಾಮಿಗಳವರ ದಿವ್ಯ ಮಾರ್ಗದ ನದಲ್ಲಿ ಮುನ್ನಡೆದಿರುವ ಪತ್ರಿಕೆ. ಶ್ರೀ ದಾಸೋಹ ಸೇವಾ ತತ್ಪರತೆಯಿಂದ ಹೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗ ನಾಡಿನ ಗಣ್ಯ ಲೇಖಕರಿಂದ ಸಾಹಿ ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷ ಇತಿಹಾಸ, ವೈಚಾರಿಕ, ಚಿಂತನ ಮುಂತಾ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀ ಲೇಖನಗಳನ್ನು ಪಡೆಯಲು ಸಾಕ ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇ ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾ ಕೊಳ್ಳುವ ಅಧಿಕಾರ ಸಂಪಾದಕರಿಗ ಅನುವಾದ, ರೂಪಾಂತರ ಲೇಖನಗ ಮೂಲ ಕೃತಿಕಾರರ ಅನುಮತಿ ಪಡೆ ಬೇಕು. ಸ್ವೀಕೃತ ಲೇಖನಗಳಿಗೆ ಸೂ ಸಂಭಾವನೆ ಕೊಡಲಾಗುವುದು.


" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥ

# ಸಂಪಾದಕೀಯ

## ...ಂಪು ದೀಪ

ಧಾರವಾಡದ ಮುರುಘಾ ಮಠದಪೂಜ್ಯ ಶ್ರೀ ಮಹಾಂತ ಸ್ವಾಮಿಗಳು ದಿನಾಂಕ ...2-6-93 ರಂದು ಲಿಂಗೈಕ್ಯರಾದರು. ಮುರುಘಾಮಠದ ಹಿರಿಯಸ್ವಾಮಿಗಳವರ ...ನಸನ್ನು ನನಸಾಗಿಸಿದ್ದರು. ಉತ್ತರ ಕರ್ನಾಟಕ ಶಿಕ್ಷಣ ಕ್ಷೇತ್ರಕ್ಕೆ ಗಣನೀಯ ...ೊಡುಗೆಯನ್ನು ನೀಡಿದ್ದರು.

'ಮಹಾಪ್ರಭುಗಳು' ಎಂದೇ ಭಕ್ತರ ಹೃನ್ಮನದಲ್ಲಿ ನೆಲಸಿದ ಶಿವಯೋಗಿಗಳು. ...ುಂದಗೋಳದಪಶುಪತಿಹಾಳದಲ್ಲಿ ಭಕ್ತದಂಪತಿಗಳು ಶಿವಸಂಗಯ್ಯ ಮತ್ತು ಕರಿಬಸಮ್ಮ ...ವರೀರ್ವರ ಪುಣ್ಯದಬಿತ್ತು '**ಮಹಾತಪಸ್ವಿಗಳು**' ಬಾಲ್ಯದಲ್ಲಿಯೇ ಪರಮಪೂಜ್ಯ ...ವಯೋಗಿಶಿಖಾಮಣಿ ಶ್ರೀ ಮೃತ್ಯುಂಜಯಸ್ವಾಮಿಗಳ ಅನುಗ್ರಹಕ್ಕೆ ಪಾತ್ರರಾದರು. ...933 ರಲ್ಲಿ ಮುರುಘಾಮಠದ ಕಿರಿಯಸ್ವಾಮಿಗಳಾಗಿ ವಿದ್ಯುಕ್ತರಾದರು. ತಮ್ಮ ...ುರುಗಳು –ಶ್ರೀ ಮೃತ್ಯುಂಜಯಪ್ಪಗಳು- 1964 ರಲ್ಲಿ ಲಿಂಗೈಕ್ಯರಾದ ನಂತರ ಶ್ರೀ ...ುಠದ ಸೇವಾಮಣಿಹವನ್ನು 'ಶಿವಕೃಪೆ' ಯೆಂದು ಸ್ವೀಕರಿಸಿದರು. 1918 ರಲ್ಲಿ ...ಾರಂಭವಾದ ಮುರುಘಾಮಠ ಮುನ್ನೂರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಆಶ್ರಯ ...ೀಡುತ್ತ ಬಂದಿದೆ. ಮಹಾಂತಪ್ಪಗಳು ವಿದ್ಯಾರ್ಥಿಗಳ ವಸತಿಗಾಗಿ 126 ಕೋಣೆಗಳ ...ೃಹತ್ ವಿದ್ಯಾರ್ಥಿನಿಲಯ ಸ್ಥಾಪಿಸಿದರು. ದಾಸೋಹದ ನಿರಂತರ ಸೇವೆಗಾಗಿ 40 ...ಕ್ಷ ನಿಧಿ ಸಂಗ್ರಹಿಸಿದರು. ಧಾರ್ಮಿಕಸಾಹಿತ್ಯ ಪ್ರಕಟಣೆಗಾಗಿ ಶ್ರಮಿಸಿದರು. ಬಾಲ ...ಲಾ ಮಹಂತಶಿವಯೋಗಿಶ್ವರ ಗ್ರಂಥಮಾಲೆ ಪ್ರಾರಂಭಿಸಿ 120 ಗ್ರಂಥ ಪ್ರಕಟಿಸಿದರು. ...937 ರಲ್ಲಿ "ಸಾವಧಾನ" ಪತ್ರಿಕೆ ಹೊರತಂದರು. ಶಿಕ್ಷಣಕ್ಷೇತ್ರದಲ್ಲಿ ಸಕ್ರಿಯಾ ...ಕ್ತಿಯಿಂದ ದುಡಿದು ಶಿಕ್ಷಣಸಂಸ್ಥೆಗಳನ್ನು ಸ್ಥಾಪಿಸಿದರು. ಅದರ ಪರಿಣಾಮವಾಗಿ ಇಂದು ...ೃತ್ಯುಂಜಯ ಹೈಸ್ಕೂಲ್, ಮೃತ್ಯುಂಜಯ ಕಾಲೇಜು ಮಹಾಂತೇಶ ಶಿಶುವಿಹಾರ ...ುತ್ತು ಪ್ರಾಥಮಿಕ ಶಾಲೆಗಳು ಧಾರವಾಡದಲ್ಲಿ ಸೇವಾನಿರತವಾಗಿವೆ. ಅಂತೆಯೇ ...ಂಸಬಾವಿಯಲ್ಲಿ ಮೃತ್ಯುಂಜಯ ವಿದ್ಯಾಪೀಠದಲ್ಲಿ ನೂತನ ಶಿಕ್ಷಣಸಂಸ್ಥೆಗಳನ್ನು ...ಾರಂಭಿಸಿದರು ನಾಗೂಬಾಯಿಮಾಮಲೇ ದೇಸಾಯಿ ಹೆಣ್ಣುಮಕ್ಕಳಶಾಲೆ; ಅಕ್ಕ ...ುಹಾದೇವಿ ವಿದ್ಯಾರ್ಥಿನಿಯರ ಪ್ರಸಾದನಿಲಯ, ಮಹಾಂತಸ್ವಾಮಿ ಪದವಿಕಾಲೇಜು ...ಂಜಿನಿಯರಿಂಗ್, ಆಟೊಮೋಬೈಲ್ ಮತ್ತು ಎಲೆಕ್ಟ್ರಾನಿಕ್ಸ್ ಡಿಪ್ಲೊಮಾ ತರಗತಿಗಳು ...ಂದು ಹಂಸಭಾವಿಯಲ್ಲಿ ನಡೆಯುತ್ತಿವೆ. ಹಾವೇರಿಯ ಕುರುಬಗೊಂಡದಲ್ಲಿ ...ೃತ್ಯುಂಜಯ ಹೈಸ್ಕೂಲ್ ನಡೆಯುತ್ತಿದೆ.

ಪೂಜ್ಯ ಮಹಾಂತಪ್ಪಗಳು ದೇಶ ಸಂಚಾರಮಾಡಿ ವೀರಶೈವ ಧರ್ಮ ಪ್ರಸಾರ ...ಾಡಿದ್ದರು. ಬಸವಾದಿ ಪ್ರಮಥರ ವಚನ ಸಾಹಿತ್ಯದಲ್ಲಿ ಆಳವಾದ ಅಧ್ಯಯನ ...ಾಡಿದ್ದರಲ್ಲದೆ ಶ್ರೀ ಗುರುಕರುಣ ತ್ರಿವಿಧಿಯನ್ನು ಕಂಠಪಾಠ ಮಾಡಿದ್ದರು. ಅಖಿಲ ...ಾರತ ಶಿವಾನುಭವ ಸಂಸ್ಥೆಯ ಮೂಲಕ ಯುವ ಜನಾಂಗದಲ್ಲಿ ಪ್ರಜ್ಞೆ

ಮೂಡುವಂತೆ ಪರೀಕ್ಷೆಗಳನ್ನು ನಡೆಸುವ ವ್ಯವಸ್ಥೆ ಮಾಡಿದ್ದರು. 'ಆತ್ಮನಿರೀಕ್ಷಣೆ'ಯ ಮಂತ್ರವನ್ನು ಭಕ್ತಾದಿಗಳಿಗೆ ಉಪದೇಶಿಸುತ್ತಿದ್ದರು. "ಶಿವಕೃಪೆ' ಮಹಾಂತಪ್ಪಗಳ ಮಾತು ಮಾತಿನಲ್ಲಿ ಅರಳುತ್ತಿದ್ದ ವಿನಯಪುಷ್ಪ. ಅಪ್ಪಗಳದು ನಿಷ್ಕಳಂಕ ವ್ಯಕ್ತಿತ್ವ ನಿರಾಡಂಬರ ಪರಿಸರ, ನಿರಂತರ ಶಿವಧ್ಯಾನವಾಗಿತ್ತು. ಜಗದ್ಗುರು ಪೀಠಗಳ ಆಮಂತ್ರಣ ಬಂದಾಗಲೂ ನಯವಾಗಿ ನಿರಾಕರಿಸಿದರು. ಗುರು ತೋರಿದ ಹಾದಿಗಿ ಅಂಥ ಆಮಂತ್ರಣಗಳು ಮಹಾಂತಪ್ಪಗಳಿಗೆ ಹೆಚ್ಚಿನದನೆನಿಸಲಿಲ್ಲ. ಕಾಯಕ ನಿ ರಾಗಬೇಕು ಎನ್ನುತ್ತಿದ್ದರು. ಗಳಿಕೆಯನ್ನು ಸತ್ಕಾರ್ಯಕ್ಕೆ ಬಳಸಬೇಕು ಎಂದು ಹೇಳ ತ್ತಿದ್ದರು. ಮಹಾಂತಪ್ಪಗಳ ಶಿಷ್ಯವೃಂದಕ್ಕೆ ಜಾತಿ ಕುಲ ಪಂಥಗಳಿರಲಿಲ್ಲ, ಪ್ರೀತಿಯ ಮಂಗಳ 'ತಂಪು ದೀಪ'ವಾಗಿ ಭಕ್ತಕೋಟಿಯನ್ನು ಹರಸುತ್ತಿದ್ದರು. ಇಂದು ಪೂಜ್ಯ ಲಿಂಗದೊಳಗಾಗಿದ್ದಾರೆ. ಪೂಜ್ಯ ಮಹಾಂತಪ್ಪಗಳನ್ನು ಅಗಲಿದ ಭಕ್ತಸಮುದಾಯ ಅನಾಥವಾಗಿದೆ. ಆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಭಕ್ತಾದಿಗಳಿ ಮಹಾಂತಪ್ಪಗಳೇ ಅನುಗ್ರಹಿಸುವಂತಾಗಲಿ ಎನ್ನುತ್ತ ಪೂಜ್ಯರಿಗೆ ಭಕ್ತಿಪೂರ್ವ ಶ್ರದ್ಧಾಂಜಲಿಯನ್ನು 'ಸಿದ್ಧಗಂಗಾ' ಅರ್ಪಿಸುತ್ತದೆ.

## ಅಂತ್ಯವಿಲ್ಲದ ಮಹಾಂತಪ್ಪಗಳು

ಮಹಾಂತಪ್ಪ ಗುರುವೆ
ನಿನ್ನ ಭಕ್ತರಿಗೆ ನೀನೊಂದು ವರವೆ
ಭಕ್ತಿಯಿಂದ ಭಜಿಸಿದೊಡೆ ನೀ ಓಡಿ ಬರುವೆ
ಹೇ! ಮಹಾಂತಪ್ಪ ಗುರುವೆ
ಮುರುಘಾಮಠದಲಿ ನೀ ನೆಲೆಸಿರುವೆ
ಮೃತ್ಯುಂಜಯ ಅಪ್ಪಗಳ ಪ್ರೇಮದ ಶಿಶುವೆ
ನೀ ನೆಲೆಸಿದ ಆ ನೆಲೆ ಅಜರಾಮರವೇ
ಹೇ ಮಹಾಂತಪ್ಪ ಗುರುವೆ.
ನೀ ನುಡಿದಾ ನುಡಿ ಕಿವಿಗೆ ಮೃದು ವಚನ ವಲ್ಲವೆ
ನೀ ನೋಡಿದಾ ನೋಟ ಅಂಧತೆಯ ನಿವಾರಣವೆ
ನೀ ನಡೆದಾ ನೆಲ ನಿರ್ಬಂಜರವೆ
ಹೇ ಮಹಾಂತಪ್ಪ ಗುರುವೆ
ನಿನ್ನ ಭಕ್ತರಿಗಾಗಿ ತಪವ ಗೈದಿರುವೆ
ವಿದ್ಯಾರ್ಥಿ ಜೀವನಕೆ ನೀ ಊರುಗೋಲಾಗಿರುವೆ
ನೀ ಅಂತ್ಯವೆ ಇಲ್ಲದ ಮಹಾಂತನಲ್ಲವೆ
ಹೇ ಮಹಾಂತಪ್ಪ ಗುರುವೆ

ಕೃಪೆ:- ಸಾವಧಾನ

# ದೇವರೆಲ್ಲಿದ್ದಾನೆ ?

ಚ್. ಗವಿಸಿದ್ದಯ್ಯ, ಶಿಕ್ಷಕರು, ಗ್ರಾಮಾಂತರ ಪ್ರೌಢಶಾಲೆ, ಆವತಿ, ಬೆಂಗಳೂರು ಜಿಲ್ಲೆ.

ಬೆಂಜಮಿನ್ ಫ್ರಾಂಕ್‌ಲಿನ್ ಎಂದರೆ ಮಕ್ಕಳಿಗೆ ಎಲ್ಲಿಲ್ಲದ ಪ್ರೀತಿ ಮತ್ತು ವಿಶ್ವಾಸ. ಈತ ಅಮೇರಿಕಾದ ಹೆಸರಾದ ವಿಜ್ಞಾನಿ.

ಒಂದು ದಿನ ಬೆಂಜಮಿನ್ ಫ್ರಾಂಕ್‌ಲಿನ್ನನು ತನ್ನಪ್ರಯೋಗಶಾಲೆಯ ಕಡೆಗೆ ಹೋಗುತ್ತಿದ್ದನು. ಆಕಾಶದಲ್ಲಿ ಸೂರ್ಯ ದಗದಗನೆ ಉರಿಯುತ್ತಿದ್ದನು. ದೂರದಿಂದಲೇ ಆತನನ್ನು ನೋಡಿದ ಮಕ್ಕಳು ಅತನ ಸುತ್ತ ನೆರೆದು ಆತನ ಕೈಗಳನ್ನೆತ್ತಿ ಪ್ರೀತಿಯಿಂದ ಮುತ್ತಿಕ್ಕತೊಡಗಿದರು.

ಅವರಲ್ಲಿ ಒಂದುಮಗು"ವಿದ್ವಾಂಸನಾದ ಮಿಸ್ಟರ್ ಫ್ರಾಂಕ್‌ಲಿನ್, ದೇವರೆಲ್ಲಿದ್ದಾನೆ, ಎನ್ನುವುದನ್ನು ಹೇಳಬಲ್ಲಿರಾ"?ಎಂದು ಪ್ರಶ್ನಿಸಿತು.

ಪುಟ್ಟ ಮಗುವಿನ ಮಾತನ್ನು ಕೇಳಿದ ಫ್ರಾಂಕ್‌ಲಿನ್ ಮುಗುಳ್ನಗುತ್ತ, ಸೂರ್ಯನ ಬೆಳಕು ತುಂಬಿದ ಆಕಾಶದತ್ತ ತನ್ನ ಕೈತೋರಿಸುತ್ತ"ನೇರವಾಗಿ ಸೂರ‍್ಯನ ಕಡೆ ನೋಡಲು ಪ್ರಯತ್ನಿಸು ಮಗು" ಎಂದನು,

ಫ್ರಾಂಕ್‌ಲಿನ್ನನ ಮಾತಿನಂತೆ ದಗದಗನೆ ಉರಿಯುತ್ತಿರುವ ಸೂರ್ಯನ ಕಡೆ ನೋಡುವ ಆ ಮಗು ಪ್ರಯತ್ನಿಸಿ ಸಾಧ್ಯವಾಗದಿದ್ದಾಗ ತನ್ನ ಕೈಯನ್ನು ಮರೆಮಾಡಿಕೊಂಡು ನೋಡಲು ಆ ಮಗು ಪ್ರಯತ್ನಿಸಿತು, ಆಗಲೂ ಸಹ ಸಾಧ್ಯವಾಗಲಿಲ್ಲ. "ಉರಿಯುತ್ತಿರುವ ಸೂರ್ಯನತ್ತ ನೋಡಲು ನನಗೆ ಸಾಧ್ಯವಿಲ್ಲ" ಎಂದಿತು. ಆ ಮಗು ನಿರಾಶದಿಂದ. "ಹೇಗೆ ಸೂರ್ಯನು ಬೆಳಕು ಮತ್ತು ಶಾಖದ ಕೇಂದ್ರವಾಗಿರುವನೋ ಹಾಗೆಯೇ ದೇವರು ಜ್ಞಾನ ಮತ್ತು ಶ್ರೇಷ್ಠತೆ ಅಗಾಧವಾದ ಕೇಂದ್ರವಾಗಿದ್ದಾನೆ. ಆತನನ್ನು ನಾವು ನೋಡಲು ಸಾಧ್ಯವಿಲ್ಲ.

ಒಳ್ಳೆಯ ಜ್ಞಾನದ ಸಂಪಾದನೆ, ಒಳ್ಳೆಯ ನಡೆ ನುಡಿ, ಒಳ್ಳೆಯ ಕಾರ್ಯ, ಮುಂತಾದವುಗಳು ಸರ್ವಜ್ಞ Omniscient) ಸರ್ವಶಕ್ತ (Omnipotent) ಸರ್ವವ್ಯಾಪಿ (Omnipresent)ಯಾದ ಭಗವಂತನ ಸಾಮಿಪ್ಯದತ್ತ ಸಾಗಲು ಸಾಧ್ಯ. ಆಗಮಾತ್ರ ನಿನ್ನ ಆತ್ಮದಲ್ಲಿ ಆ ಭಗವಂತನನ್ನು ಕಾಣಬಹುದು ಎಂದನು ಮಹಾನುಭಾವ ಬೆಂಜಮಿನ್ ಫ್ರಾಂಕ್‌ಲಿನ್:

— (ಸಂಗ್ರಹ)

# ಆಸೆಯೇ ದುಃಖಕ್ಕೆ ಮೂಲ

ಪ್ರೊ|| ಸಂಗಮೇಶ ಹಂಡಿಗಿ, M.A,P.hD, ನವಿಲುಗುಂದ, ಧಾರವಾಡ-ಜಿಲ್ಲೆ

ನಾವು ನಮ್ಮ ಸುತ್ತಲೂ ಇರುವ ವಸ್ತುಗಳನ್ನು ಬೇಕು ಎಂದು ಆಸೆಪಡುವು ದು:ಖಕ್ಕೆ ಕಾರಣ. ಆಸೆಯನ್ನು ಬಿಟ್ಟರೆ ದು:ಖವಿರುವುದಿಲ್ಲ. ಇದು ಗೌತಮಬುದ್ಧ ಸಂದೇಶ. ಕ್ಷಣಿಕ ಸುಖಕ್ಕಾಗಿ ಹಾತೊರೆದು ಆಸೆಯ ಬಲೆಯಲ್ಲಿ ಬಿ ಒದ್ದಾಡುತ್ತಾ ಅಪಾರ ದು:ಖವನ್ನು ಅನುಭವಿಸುವವರೇ ಬಹಳ. ಸಾಸವೆಯ ಸುಖಕ್ಕೆ ಸಾಗರದಷ್ಟು ದು:ಖ. ವನರಾಜನೆನಿಸಿದ ಸಿಂಹವು ಮಾಂಸದ ಆಸೆಯಿಂ ಬಲೆಯಲ್ಲಿ ಬೀಳುವಂತೆ ಮುಕ್ತನಾಗುವ ಶಕ್ತಿಪಡೆದ ಆತ್ಮನು ಆಸೆಯ ಬಲೆಯಿಂ ಸಂಸಾರದ ದು:ಖದಲ್ಲಿ ಸಿಕ್ಕಿಬೀಳುತ್ತಾನೆ. ಆಸೆಯ ಬಲೆಯಿಂದ ಪಾರಾಗಿ ಶಾಶ್ವ ಸುಖ ಹೊಂದಿದವರು ಅಪರೂಪ. ಆದರೂ ಅಮಿತವಾದ ಆಸೆಯನ್ನು ಮಿತಗೊಳಿಸುವುದರಲ್ಲಿಯೇ ಮಾನವನ ಹಿತ ಅಡಗಿದೆ.

ಹುಟ್ಟಿನಿಂದ ಹಿಡಿದು ಸಾವಿನವರೆಗೂ ಆಸೆಯು ಮೃಗಜಲದಂತೆ ತೋ ಗಾಸಿಗೊಳಿಸುತ್ತದೆ. ಒಂದು ವಸ್ತು ಬೇಕೆಂದು ಮನದಲ್ಲಿ ಬಯಸುವುದು ಕಾಮ ಆಶಿಸಿದ ವಸ್ತು ದೊರೆಯದಿದ್ದರೆ ಕ್ರೋಧ ಹುಟ್ಟುತ್ತದೆ. ಒಂದು ವೇಳೆ ದೊರೆತ ಅದು ತನಗೇ ಇರಲೆಂಬ ಲೋಭ. ಅದರ ಬಗ್ಗೆ ಅತಿ ಮಮತೆ ಹೊಂದಿದರೆ ಮೋಹ ಅದು ತನ್ನಲ್ಲಿ ಮಾತ್ರ ಇದೆಯೆಂಬ ಮದ. ಅಂಥ ವಸ್ತು ಮತ್ತೊಬ್ಬರಲ್ಲಿದ್ದ ಮತ್ಸರ. ಹೀಗೆ ಆಸೆಯಿಂದಲೇ ಆರು ವೈರಿಗಳು ಹುಟ್ಟಿ ಕಾಡುತ್ತವೆ. ಮನುಷ್ಯನನ ಬಗೆಬಗೆಯಾಗಿ ಹಿಂಸಿಸಿ ದು:ಖವನ್ನುಂಟುಮಾಡುತ್ತವೆ.

ಆಸೆಯಿರುವವರೆಗೂ ಪರರನ್ನು ಆಶ್ರಯಿಸಬೇಕಾಗುತ್ತದೆ. ಈ ಹಂಗಿ ಅವಲಂಬನ ಕಷ್ಟಕರವಾದುದು. ಇದರಿಂದ ತನ್ನತನವನ್ನು ಅನ್ಯರಿಗೆ ಮಾರಿಕೊಳ್ಳ ಬೇಕಾಗುತ್ತದೆ. ಅಂತೆಯೇ "ಆಸೆಯೇ ದಾಸಕಾಣಿರೊ ನಿರಾಶೆಯೇ ಈಶ ಕಾಣಿರಣ್ಣಾ ಎಂದಿದ್ದಾನೆ ಉರಿಲಿಂಗಪೆದ್ದಿ.

ಈ ಕುರಿತು ಒಂದು ದೃಷ್ಟಾಂತವನ್ನು ಸ್ಮರಿಸಬಹುದು- ಕಲ್ಯಾಣದ ಶರಣ ಅಂಗಳದಲ್ಲಿ ಬಿದ್ದ ಅಕ್ಕಿಯನ್ನಾಯ್ದು ತರುವದು ಆಯ್ದಕ್ಕಿ ಮಾರಯ್ಯನ ಕಾಯಕ ಒಂದು ದಿನ ಬಸವಣ್ಣನವರ ಮನೆಯ ಮುಂದೆ ಅಕ್ಕಿ ಆಯುವ ಸರತಿ ಬರುತ್ತದೆ ಶರಣರಿಗೆ ಶ್ರಮವಾಗಬಾರದೆಂದು ಬಸವಣ್ಣನವರು ಅಂಗಳದಲ್ಲಿ ಹೆಚ್ಚಾಗಿ ಅಕ್ಕಿಯನ್ನು ಸುರಿಸಿದ್ದರು. "ಮಾರಯ್ಯನು ಅಂದು ಆಯ್ದ ಅಕ್ಕಿ ದಿನಕ್ಕಿಂತ ಹೆಚ್ಚಾಯಿತು ಪತಿಯು ದಿನಕ್ಕಿಂತ ಹೆಚ್ಚು ಅಕ್ಕಿ ತಂದುದು ಆಸೆಯಿಂದ ಕೂಡಿದುದೆಂದು ಸತಿ ಲಕ್ಕಮ್ಮನಿಗೆ ಸಹಿಸಲಿಲ್ಲ. "ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಅಯ್ಯಾ? ಈಸಕ್ಕಿಯ ಆಸೆ

ಮಗೇಕೆ ? ಈಶ್ವರನೊಪ್ಪ! ಎಂದು ಪತಿಯನ್ನೆಚ್ಚರಿಸಿ ಮರಳಿ ಸುತಿದು ಬರಲು ಹೇಳುತ್ತಾಳೆ. ಆಶೆಯ ಪಾಶವನ್ನು ಹರಿದು ಈ ತತ್ವವನ್ನು ಪಡೆದ ಈ ದಂಪತಿಗಳ ಆದರ್ಶ ಇಂದು ಎಷ್ಟು ಮುಂದಿಗಿದೆ?

ಮಾನವನ ಹಿರಿತನ ಕಿರಿತನಗಳು ಆಸೆಯನ್ನವಲಂಬಿಸಿವೆ. ಸಕಲೇಶ ಮಾದರಸ ಹೇಳಿದಂತೆ" "ಆಸೆಯಿಂದಬಿಟ್ಟು ಕಿರಿಯರಿಲ್ಲ. ನಿರಾಶೆಯಿಂದಬಿಟ್ಟು ಹಿರಿಯರಿಲ್ಲ" 'ಹುಣಸೆ ಮುಪ್ಪಾದರೂ ಹುಳಿ ಮುಪ್ಪೆ?' ಎಂಬಂತೆ ಮನುಷ್ಯನ ಮೈ ಮುಪ್ಪಾದರೂ ಮನದ ಆಸೆಯು ಮುಪ್ಪಾಗುವದಿಲ್ಲ. ಪ್ರತಿಯಾಗಿ ಆಸೆಗೆ ಯೌವನ ಪ್ರಾಪ್ತವಾಗುತ್ತದೆ. ಇದರಿಂದಾಗಿ ಮನುಷ್ಯನು ಹೊನ್ನು ಬೇಕು, ಹೆಣ್ಣು ಬೇಕು, ಮಣ್ಣು ಬೇಕು ಎನ್ನುತ್ತ ವುಗಳನ್ನು ಪಡೆಯುಬೇಕೆನ್ನುವದರಲ್ಲಿಯೇ ತನ್ನ ಆಯುಷ್ಯ ಕಳೆಯುತ್ತಾನೆ. ಅವುಗಳ ಸೆಯಲ್ಲಿಯೇ ಅಳಿದುಹೋಗುತ್ತಾನೆ. ಹೆಣ್ಣಿನ ಆಸೆಗಾಗಿ ರಾವಣ ಸತ್ತ, ಮಣ್ಣಿನ ಸೆಗಾಗಿ ದುರ್ಯೋಧನ ಸತ್ತ. ಇವರಷ್ಟೇ ಅಲ್ಲ. ಇಂಥವರು ಕೋಟಿಕೋಟಿ. ಅಂತೆಯೇ ಲ್ಲಮಪ್ರಭುದೇವರು ಹೇಳುತ್ತಾರೆ: "ಆಸೆಗೆ ಸತ್ತುದು ಕೋಟಿ, ಆಮಿಷಕ್ಕೆ ಸತ್ತುದು ೋಟಿ, ಹೊನ್ನು, ಹೆಣ್ಣು, ಮಣ್ಣಿಂಗೆ ಸತ್ತುದು ಕೋಟಿ ಗುಹೇಶ್ವರಾ ನಿನಗಾಗಿ ತ್ತವರನಾರನೂ ಕಾಣೆ."

ಂದು ಆಸೆಯನ್ನು ತಣಿಸಬೇಕೇನ್ನುವದರೊಳಗೆ ಮತ್ತೊಂದು ಆಸೆ ಪುಟಿದೇಳುತ್ತದೆ. ಕ್ತಬೀಜಾಸುರನ ಒಂದೊಂದು ಹನಿ ರಕ್ತ ನೆಲಕ್ಕೆ ಬಿದ್ದರೆ ಒಬ್ಬೊಬ್ಬ ರಾಕ್ಷಸನ ಉತ್ಪತ್ತಿ ಯಾಗುತ್ತಿತ್ತಂತೆ. ಆಸೆಗಳು ರಕ್ತಬೀಜಾಸುರನ ಸಂತಾನವಿದ್ದಂತೆ. ಹೃದಯ ಭೂಮಿಯಲ್ಲಿ ಸೆಗಳ ಪಾರ್ಥೇನಿಯಂ ರಕ್ಕಸ ಕಳೆ ರಭಸದಿಂದ ಬೆಳೆಯುತ್ತಿರುವಾಗ ಸದ್ಗುಣಗಳ ಳೆ ಸಮೃದ್ಧಿಯಾಗಿ ಬರಲು ಸಾಧ್ಯವಿಲ್ಲ,

ನೂರು ಗಳಿಸಿದರೆ ಸಾವಿರ ಗಳಿಸುವಾಸೆ. ಸಾವಿರ ಕೂಡಿದಾಗ ಲಕ್ಷ, ಕೋಟಿಗಳಿಸು ಸೆ. ಧನದಾಸೆಗೆ ಇತಿಮಿತಿಗಳಿಲ್ಲ. ಆಸೆಯದಾಹವನ್ನು ತಣಿಸಲು ಪ್ರಯತ್ನಿಸಿದಷ್ಟೂ ವ ವೈಚಿತ್ರ್ಯ ಅದಕ್ಕಿದೆ. ಅಗ್ನಿಯು ಉರುವಲು ಹಾಕಿದಂತೆ ಪ್ರಖರವಾಗುತ್ತ ಹೋಗು ದೆ. ನದಿಗಳು ಸಮುದ್ರಕ್ಕೆ ಕೂಡಿದಂತೆ ನೀರಿನ ಪ್ರವಾಹವು ರಭಸವಾಗುತ್ತದೆ. ೆಯುಳ್ಳವನಿಗೆ ಮೂರು ಲೋಕಗಳ ಸಂಪತ್ತು ದೊರೆತರೂ ಆತನ ದಾಹವು ಕಡಿಮೆ ಾಗುವದಿಲ್ಲ. ಹೀಗಾಗಿ ಆತನ ಬದುಕಿನಲ್ಲಿ ದುಃಖವೇ ಕಟ್ಟಿಟ್ಟ ಬುತ್ತಿಯಾಗುತ್ತದೆ. ತೃಪ್ತಿ ಸಮಾಧಾನ ವೆಂಬುದು ಕನಸಿನ ಮಾತಾಗುತ್ತದೆ. "ಸಾಕ ಅಂದಾಂವ ವಕಾರ. ಬೇಕ ಅಂದಾಂವ ಬಡವ" ಎಂಬ ನಾಣ್ಣುಡಿಯ ಸಾರವನ್ನರಿತು ನಡೆದವ ತೃಪ್ತಿ ಸಂಪನ್ನರೆಷ್ಟು ಜನರಿದ್ದಾರೆ? ಆಸೆಗಳು ಅಪರಿಮಿತ. ಪದಾರ್ಥಗಳು ಪರಿಮಿತ. ಗಾಗಿ ಅನೇಕ ಆಸೆಗಳು ಈಡೇರದೆ ನಿರಾಶೆಯಲ್ಲಿಯೇ ಪರ್ಯವಸಾನವಾಗುತ್ತವೆ. ಖಕ್ಕೆ ಕಾರಣವಾಗುತ್ತವೆ. ಆದುದರಿಂದ ಆಸೆಗಳನ್ನು ಕಡಿಮೆ ಮಾಡುತ್ತ ಹೋದಂತೆ ಖವು ಕಡಿಮೆಯಾಗುತ್ತದೆ. ಇದನ್ನರಿತು ನಡೆದರೆ ನೆಮ್ಮದಿಯ ಬಾಳು ಸಾಧ್ಯ.

ನ್.93

ಜಾಹೀ-93

# "ಜನನಪೂರ್ವ ಸಂಸ್ಕಾರ"

ಕರ್ಕಿಸುಬ್ರಾಯ ಭಟ್ಟ ಮುಖ್ಯೋಪಾಧ್ಯಾಯರು, ಹಿಂದೂ ಹೈಸ್ಕೂಲ್, ಕಾರವಾರ.

ಒಬ್ಬ ವ್ಯಕ್ತಿ ಸಮಾಜದ ನಿಯಮಕ್ಕೆ ವಿರುದ್ಧ ಕೆಲಸವನ್ನು ಮಾಡುತ್ತಿದ್ದರೆ ನನ್ನು ಒಳ್ಳೆಯ ಸಂಸ್ಕಾರವನ್ನು ಹೊಂದಿಲ್ಲ ಎಂದು ಎಲ್ಲಡೆಯಲ್ಲಿ ಕೇಳಿಬರುತ್ತದೆ. ಂಸ್ಕಾರ" ಕ್ಕೆ ಅರ್ಥವನ್ನು ಇಂಗ್ಲೀಷಿನಲ್ಲಿ ಆಗಲಿ ಅಥವಾ ಬೇರೆ ಭಾಷೆಯಲ್ಲಿ ಳುವದು ಸುಲಭಸಾಧ್ಯವಲ್ಲ. ಯಾವುದೇ ಒಂದು ಕ್ರಿಯೆಯನ್ನು ಉದಾಹರಿಸಿ ೇ ಸಂಸ್ಕಾರ ಎಂದು ಹೇಳಲು ಸಾಧ್ಯವಿಲ್ಲ. ಒಳ್ಳೆಯ ಸಂಸ್ಕಾರದಲ್ಲಿ ಇದೂ ಒಂದು ನು ಹೇಳಬಹುದು. ಇದರ ಅರ್ಥ ಸಾಗರದಷ್ಟೇ ವಿಶಾಲ!

ಭಾರತೀಯ ಸಿದ್ಧಾಂತ ಮತ್ತು ಸಾಧನೆಯ ಸಮಗ್ರ ವ್ಯವಸ್ಥೆಯನ್ನು ಮೂರು ಗವಾಗಿ ಮಾಡುತ್ತೇವೆ. ಜ್ಞಾನ ಕಾಂಡ, ಉಪಾಸನಾಕಾಂಡ, ಕರ್ಮಕಾಂಡ ಎಂದು ಾಗ ಮಾಡುತ್ತೇವೆ. ಕರ್ಮ ಎಂದರೆ ಮಾನವನ ಎಲ್ಲ ಕ್ರಿಯೆ ಒಳಗೊಂಡಿರು . ಕರ್ಮಕಾಂಡದ ಬಹು ಪ್ರಧಾನ ಅಂಗವೇ "ಸಂಸ್ಕಾರ" ಸಂಸ್ಕಾರವು ಮಾನವನ ನ ಪೂರ್ವದಿಂದ ಮರಣಾನಂತರದ ವರೆಗೂ ನಿರಂತವಾಗಿ ಮುಂದುವರೆಯುತ್ತದೆ. ಸಂಸ್ಕಾರವು ಆತ್ಮದ ಗತಿಯನ್ನು ನಿರ್ಣಯಿಸುವುದಲ್ಲದೆ ಸಾಂಸ್ಕೃತಿಕ ಹಾಗು ತಿಕ ಮೌಲ್ಯವನ್ನೂ ಹೊಂದಿದೆ, ಇದರ ಹೊಹು ಶಿಕ್ಷಣ, ತರಬೇತಿ, ಶಿಷ್ಟಾಚಾರ, ಣ್ಯ ಸ್ವಚ್ಛತೆ ಹಾಗೂ ಜ್ಞಾನಸಂಪಾದನೆ ಎಲ್ಲವನ್ನೂ ಒಳಗೊಂಡಿದೆ.

ಸಂಸ್ಕಾರದ ವಿವರಣೆ ಮೊತ್ತಮೊದಲು ಗೋಚರಿಸಿದ್ದು ಗೃಹ್ಯ ಸೂತ್ರದಲ್ಲಿ. ರಲ್ಲಿ 12ರಿಂದ18 ಪ್ರಕಾರ ಹೆಸರಿಸಿದ್ದು ಕ್ರಮೇಣ 16 ಹಂತ ಎಂದು ವಿಭಾಗಿ ಾಯಿತು. ಅಲ್ಲಿಯೂ ಜನನ ಪೂರ್ವ ಸಂಸ್ಕಾರ, ಬಾಲ್ಯದ ಸಂಸ್ಕಾರ, ವಿದ್ಯಾ ಸಕ್ಕೆ ಸಂಬಂಧಿಸಿದ ಸಂಸ್ಕಾರ, ಗ್ರಹಸ್ಥಾಶ್ರಮದ ಸಂಸ್ಕಾರ, ಉತ್ತರ ಕ್ರಿಯಾ ಸ್ಕಾರ ಎಂದು ವಿಭಾಗಿಸಿದರು.

ಸಂಸ್ಕಾರದ ಆರಂಭವು ಜನನ ಪೂರ್ವದಿಂದಲೇ ಗುರುತಿಸಿದ ಸೂತ್ರಕಾರರು ನವನ್ನು ಬಹುವ್ಯಾಪಕ ದೃಷ್ಟಿಯಲ್ಲಿ ಕಂಡು ಕೊಂಡಿದ್ದರು. ವ್ಯಕ್ತಿಯ ಜೀವನ ೃಷ್ಟಿಯಿಂದ ಮೊದಲಾಗುವುದಿಲ್ಲ, ಇನ್ನು ಪೂರ್ವಕ್ಕೆ ಹೋಗಿ ಆವನ ತಂದೆ ತಾಯಿ; ಸನ್ನಿವೇಶದಿಂದ ನಿಯಂತ್ರಿತ ವಾಗುತ್ತಿದ್ದವೆಂಬುದನ್ನು ಮನಗಂಡಿದ್ದರು. ಕ್ಕಾಗಿಯೇ ಅವರು ಮೊಟ್ಟಮೊದಲ ಸಂಸ್ಕಾರವನ್ನೆ "ಗರ್ಭದಾನ" ಎಂದರು. ರ್ಭದಾನ:– ಗರ್ಭದಾನ ಎಂದರೆ ಗರ್ಭದಲ್ಲಿ ಸಂತಾನ ಬೀಜವನ್ನು ಸ್ಥಾಪಿಸುವದು ು ಅರ್ಥ. ಶಿಶುವಿನ ಜನನಕ್ರಿಯೆ ಮಿಕ್ಕ ಪ್ರಾಣಿಗಳಲ್ಲಿ ಕಾಣುವಂತೆ ಕೇವಲ

ರ್.93

ಭೌತಿಕಕ್ರಿಯೆಯಲ್ಲ, ದೈಹಿಕ ತೆವಲಿಗೆ ಮಾತ್ರ ಸೀಮಿತವಲ್ಲ. ಸಾಮಾಜಿಕ ಹಾ
ನೈತಿಕ ಹಿನ್ನೆಲೆಯಲ್ಲಿ ನೋಡಬೇಕೆಂದು ಹಿಂದೂ ಧರ್ಮದ ನಂಬಿಕೆ. . ವಿವಾ
ದಂಪತಿಗಳು ಯುಕ್ತಕಾಲದಲ್ಲಿ ಜೊತೆಗೂಡಿ ವಂಶೋದ್ಧಾರಕ್ಕೆ ಬೇಕಾದ ಸಂತಾನ
ತ್ಪತ್ತಿಯನ್ನು ಮಾಡುವದು ಒಂದು ಪವಿತ್ರ ಕರ್ತವ್ಯ. "ಪಿತೃಯಣವನ್ನು ತೀರಿಸ
ಪುತ್ರಸಂತಾನ ಅವಶ್ಯ" ಎಂದು ಶೃತಿ ತಿಳಿಸುತ್ತದೆ. ಇಲ್ಲದಿದ್ದರೆ ನಂಕ ಪ್ರಾಪ್ತಿ ಎ
.ಲೂ ಹೇಳುವುದು. ಈ ಪವಿತ್ರ ಕಾರ್ಯ ಪೂರೈಕೆಯಲ್ಲಿ ದಂಪತಿಗಳು ಶಾರೀರಿಕ ಮ
ಮಾನಸಿಕ ಯೋಗ್ಯತೆ.ಯುಕ್ತಕಾಲ, ಅರ್ಹತೆ, ಹೊಣೆಗಾರಿಕೆ ಮುಂತಾದ ಅಂ
ಳೆಲ್ಲವೂ ಗಣನೆಗೆ ಬರುತ್ತವೆ.

ಪ್ರಾಚೀನ ಕಾಲದಲ್ಲಿ ಮಾನವನು ಶ್ರೇಷ್ಠನಾದ ಪುತ್ರನನ್ನುಪಡೆಯು ಬೇಕೆಂ
ಸಂಕಲ್ಪಹೂಡಿ ಮಗುವನ್ನು ಪವಿತ್ರಗೊಳಿಸಬೇಕೆಂಬ ನಿರ್ಮಲ ಭಾವನೆಯಿಂದ ತ
ಹೆಂಡತಿಯನ್ನು ಸಮೀಪಿಸಿ ಕೂಡುತ್ತಿದ್ದನು. ಅಲ್ಲಿ ಅತನಲ್ಲಿ ಇರುವದು ಕೇವ
ಪಿತೃಯುಣವನ್ನು ತೀರಿಸಬೇಕೆಂಬ ಬಯಕೆಯಿತ್ತೆ ಹೊರತು ಕಾಮವಾಂಛೆ ಇರುತ್ತಿ

ಪುಂಸವನ:- ಗರ್ಭಧರಿಸಿರುವದು ನಿಶ್ಚಿತವಾದಕೂಡಲೇ ಗರ್ಭದಲ್ಲಿರು
ಮಗುವನ್ನು ಪುಂಸವನ ಎಂಬ ಇನ್ನೊಂದು ಸಂಸ್ಕಾರದಿಂದ ಪವಿತ್ರಗೊಳಿಸಲಾಗುತ್ತ
ಗರ್ಭಿಣಿ ಸ್ತ್ರೀಯನ್ನು ಉಪಚರಿಸುವುದರಿಂದ ಗರ್ಭದಲ್ಲಿನ ಶಿಶು ಒಳ್ಳೆ ಆರೋ
ಪಡೆಯುವ ಅವಕಾಶ ಕಲ್ಪಿಸಲಾಗುತ್ತಿತ್ತು.

ಗರ್ಭಧಾರಣೆಯಾದ ಮೂರು ಅಥವಾ ನಾಲ್ಕನೇತಿಂಗಳಲ್ಲಿ ಚಂದ್ರನು ಪುರು
ನಕ್ಷತ್ರದಲ್ಲಿರುವಾಗ, ಅದರಲ್ಲೂ ತಿಷ್ಯ ನಕ್ಷತ್ರದಲ್ಲಿ ಇರುವಾಗ ಯಾವುದಾದರೂ ಒಂ
ಪುಂಸವನವನ್ನು ಆಚರಿಸಲಾಗುತ್ತಿತ್ತು. ಆ ದಿನ ತಾಯಿ ಉಪವಾಸವಿದ್ದು ಆಲದ
ಕುಡಿಯ ರಸವನ್ನು "ಹಿರಣ್ಯಗರ್ಭಗರ್ಭಸ್ಥ" ಎನ್ನುವ ವೇದಮಂತ್ರೋಚ್ಚಾರಣೆಯೊ
ಮೂಗಿನ ಹೊಳ್ಳೆಯ ಮೂಲಕ ಸೇವಿಸುತ್ತಾಳೆ. ಪುರುಷ ನಕ್ಷತ್ರದೊಂದಿಗೆ ಚಂದ್ರ
ಸಂಯೋಗವಾಗುವದು ಗಂಡುಸಂತಾನದಸೂಚಕ. ಆದ್ದರಿಂದಲೇ ಪುಂಸವನಕೆಂದ
ಭ್ರೂಣವನ್ನು ಚೈತನ್ಯಗೊಳಿಸಿ ಪುರುಷ ಸಂತಾನವನ್ನು ಪಡೆಯುವದು ಎಂದು ಅರ್ಥ
ಆಲದ ಮರದ ರಸವನ್ನು ನೀಡುವದು ಮಗುವಿನ ಉತ್ತಮ ಪೋಷಣೆಯ ಸಾಂಕೇತಿ
ಚಿಕಿತ್ಸೆ. ಇದು ವೈದಕೀಯ ಮನ್ನಣೆಯನ್ನು ಗಳಿಸಿಕೊಂಡಿವೆ. ,ಶುಶ್ರುತನು ವಟಶುಂ
ಸಹದೇವಿ ಮತ್ತು ವಿಶ್ವದೇವ ಎನ್ನುವ ವನಸ್ಪತಿಗಳನ್ನು ಹಾಲಿನೊಂದಿಗೆ ಪುಡಿಮಾ
ಗರ್ಭಿಣಿ ಸ್ತ್ರೀಯಮೂಗಿನ ಬಲಹೊಳ್ಳೆಯಲ್ಲಿ ಮೂರು ನಾಲ್ಕು ತೊಟ್ಟು ಹಾಕಿದ
ಗಂಡು ಸಂತಾನವಾಗುವದು ಎಂದಿದ್ದಾನೆ.

ಸೀಮಂತನ:- ಗರ್ಭಿಣಿ ಸ್ತ್ರೀಯನ್ನು ಯಾವರೀತಿಯಲ್ಲಿ ಉಪಚರಿಸಬೇಕ
ಹಾಗೂ ಸತ್ಕರಿಸಬೇಕು ಎನ್ನುವುದನ್ನು ಮೂರನೇ ಸಂಸ್ಕಾರವಾದ ಸೀಮಂತದ
ತಿಳಿಸಲಾಗಿದೆ. ಈ ಸಂಸ್ಕಾರದ ಗುರಿಯು ಸಾಂಕೇತಿಕ ಹಾಗೂ ವ್ಯವಹಾರಿಕವಾ
ದುದಾಗಿದೆ.

ಸೀಮಂತದಲ್ಲಿ ಗರ್ಭಿಣಿ ಸ್ತ್ರೀಗೆ ವಿಧಿವತ್ತಾಗಿ ಬೈತಲೆ ಬಾಚುತ್ತಾರೆ. ಸ್ತ್ರೀ ರ್ಭಿಣಿಯಾದಾಗ ದುಷ್ಟಶಕ್ತಿ ಆಕೆಯನ್ನು ಆಕ್ರಮಿಸಬಾರದೆಂದು ಆಕೆಯ ರಕ್ಷಣೆಗೆ ೂಕ್ತ ಕರ್ಮವನ್ನು ಆಚರಿಸಲಾಗುತ್ತದೆ. ಜನಿಸಿದ ಮಗು ದೀರ್ಘಾಯುವಾಗಬೇಕೆಂದು ಆಚರಣೆಯು ಹಿಂದಿರುವ ಧಾರ್ಮಿಕ ಸಂಕಲ್ಪ.

ಗರ್ಭಿಣಿಗೆ 5 ತಿಂಗಳಾದಾಗ ಮಗುವಿನ ಮಾನಸಿಕ ಬೆಳವಣಿಗೆ ಪ್ರಾರಂಭ ಾಗುತ್ತದೆ. ಆದ್ದರಿಂದ ಗರ್ಭಿಣಿಗೆ ಶಾರೀರಿಕ ಹಾಗೂ ಮಾನಸಿಕವಾಗಿ ಯಾವುದೇ ತಿ ಭಯವಾಗದಂತೆ ನೋಡಿಕೊಳ್ಳಬೇಕು. ಅವಳನ್ನು ಉಲ್ಲಾಸಗೊಳಿಸುವದಕ್ಕೋಸ್ಕರ ರ್ಣಚಂದ್ರ ಸುಂದರಾಂಗಿ ಎಂದು ಸಂಬೋಧಿಸಲಾಗುತ್ತದೆ. ಪತಿಯಾದವನು. ತ್ನಿಯನ್ನು ಸುಂದರತಾಣಗಳಿಗೆ ಕರೆದುಕೊಂಡು ಹೋಗುವುದು, ಮಡದಿಯ ುಂಗುರುಳನ್ನು ಬಾಚಿ ಅಂಜೂರದ ಮರದ ಶಾಖೆಯನ್ನು ಅವಳ ಕೊರಳಸುತ್ತ ಕ್ಕಿಸಿ ಈ ಫಲಭರಿತ ವೃಕ್ಷದಂತೆ ನೀನು ಫಲಭರಿತಳಾಗು ಎಂದು ಹೇಳುತ್ತಾನೆ. ರ ಮಗುವಿಗೆ ತಾಯಿಯಾಗು. ಉತ್ಸಾಹಿಯಾದ ಮಗುವಿಗೆ ತಾಯಿ ಎನಿಸು ಎಂದು ಡಿಸುತ್ತಾನೆ? ಸಂಸ್ಕಾರಗಳು ಗರ್ಭಿಣಿ ಸ್ತ್ರೀ ಮತ್ತು ಆಕೆಯ ಪತಿಯು ಒಟ್ಟಾಗಿ ತ್ತಮ ಸಂತಾನ ಪಡೆಯಲು ಬಹಳ ಸಹಾಯಕ. ಗರ್ಭಿಣಿಯ ಬಯಕೆಯನ್ನು ರವೇರಿಸಬೇಕಾಗುತ್ತದೆ.

ಗರ್ಭಿಣಿ ಸ್ತ್ರೀಗೆ ಆರು ತಿಂಗಳು ತುಂಬಿದ ನಂತರ ಆಕೆಯ ಗಂಡನು ಂಡನ ಮಾಡಿಸಬಾರದು. ರತಿಭೋಗ ಶಾರೀರಿಕ ಶ್ರಮ. ಹಗಲುನಿದ್ರೆ. ರಾತ್ರಿ ಾಗರಣೆ ರಥಾರೋಹಣ, ಭೀತಿಕಾರಕ ಘಟನೆಗಳು. ಮಂಡಿಯೂರಿ ಕುಳಿತು ಾಳ್ಳುವುದು, ಭೇದಿ ಔಷಧಿ ಸೇವನೆ ರಕ್ತ ತೆಗೆಸುವುದು, ಜಲ ಮತ್ತು ಮಲಬದ್ಧತೆ ುಂತಾದುವುಗಳನ್ನು ಮಾಡಬಾರದೆಂದು ಹೇಳಲಾಗಿದೆ.

ಈ ರೀತಿಯ ಧಾರ್ಮಿಕ ನಿಬಂಧನೆಗಳ ರೂಪದಲ್ಲಿ ಗರ್ಭಿಣಿ ಮತ್ತು ಮುಂದೆ ನಿಸುವ ಶಿಶುವಿನ ಆರೋಗ್ಯಪಾಲನೆಗೆ ಬೇಕಾದ ಎಲ್ಲಾ ಕ್ರಮಗಳನ್ನು ತೆಗೆದು ಾಳ್ಳಲಾಗುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಈ ರೀತಿಯ ಸಂಸ್ಕಾರವನ್ನು ಅಪಹಾಸ್ಯ ಾಡುವ ಜನರು ನಮ್ಮ ಸಂಸ್ಕೃತಿಯ ಸಂಸ್ಕಾರದ ಹಿಂದಿರುವ ವೈಜ್ಞಾನಿಕ ಆಳ ತಿಯುಕ್ತ ಆಚಾರ, ಜೀವನದ ಮಹತ್ವ, ಸಹಜೀವನದ ಸತ್ವ ಎಲ್ಲವನ್ನೂ ಿಯಬೇಕಾದುದು ಅಗತ್ಯ. ಮಗುವಿನ ಜನನ ಕೇವಲ ಕಾಮದ ಪ್ರತಿರೂಪ ನ್ನುವ ಭಾವನೆದೂರವಾಗಿ ಇದೊಂದು ಪವಿತ್ರಕಾರ್ಯ ಎನ್ನುವಭಾವನೆ ಬೆಳೆಯ ೇಕಾಗಿದೆ.

# ಪರಿಸ್ಥಿತಿ ಮತ್ತು ಪರಿಸರ ವಿಜ್ಞಾನ

(ಮುಂದುವರಿದ ಲೇಖನ)

ಡಾ|| ಐಸ್. ಕೆ. ಕಡೇಕೋಟಿಪ, ಮಾನವ ಶಾಸ್ತ್ರ ವಿಭಾಗ, ಕ. ವಿ. ವಿದ್ಯಾಲಯ

ಧಾರವಾಡ.

**ಪರಿಸರ ಮತ್ತು ಅಭಿವೃದ್ಧಿ :**

ಪ್ರಾಕೃತಿಕ ಪರಿಸ್ಥಿತಿ ಮತ್ತು ಪರಿಸರಗಳನ್ನು ಸರಿಯಾಗಿ ಉಪಯೋಗ ಮಾಡಿಕೊಂಡು ದೇಶವನ್ನು ಮತ್ತು ಸಮಾಜವನ್ನು ಸಮೃದ್ಧಿಪಡಿಸುವದರಿಂದಲೇ ನಮ್ಮ ಸಂಸ್ಕೃತಿಯನ್ನು ನವನಾಗರಿಕತೆಯತ್ತ ಒಯ್ಯುವದರಲ್ಲಿ ನಮ್ಮ ಶ್ರೇಯಸ್ಸು ಅಡಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶವನ್ನು ಬ್ರಿಟಿಷರು ಆಳುತ್ತಿದ್ದರು. ಅವರಿಗೆ ದೇಶದ ನಾಗರಿಕತೆಯನ್ನು ಸಮೃದ್ಧಿಪಡಿಸುವುದಕ್ಕಿಂತ ದೇಶದಲ್ಲಿ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಯ್ದುಕೊಳ್ಳುವದೇ ಒಂದು ಗುರಿಯಾಗಿತ್ತು. ಆದರೆ ದೇಶವು ಸ್ವಾತಂತ್ರ್ಯ ಪಡೆದ ನಂತರ ನಮ್ಮ ಗೊತ್ತು ಗುರಿಗಳು ಬೇರೆಯಾಗಿವೆ. ಈ ದಿಶೆಯಲ್ಲಿ ನಮ್ಮ ನಾಯಕರು ದೇಶವನ್ನು ಆಹಾರ ಪೂರೈಸುವಲ್ಲಿ ನಮ್ಮ ಕಾಲಮೇಲೆ ನಾವೇ ನಿಲ್ಲುವಂತೆ ಮಾಡಿದ್ದಾರೆ. ಭಾರತವು ಮೂಲತಃ ಬೇಸಾಯದ ದೇಶವಾಗಿದ್ದರೂ ನಾವು ಬೇರೆ ದೇಶಗಳಿಂದ ಆಹಾರ ಸಾಮುಗ್ರಿಗಳನ್ನು ತರಿಸಿಕೊಳ್ಳುತ್ತಿದ್ದೆವು. ನಮ್ಮ ಔದ್ಯೋಗಿಕ ಪ್ರಗತಿಯೇ ಆಗಿರಲಿಲ್ಲ. ವಿಪುಲವಾಗಿ ನೀರು ಒದಗಿಸುವ ನದಿಗಳಿದ್ದರೂ ನಮ್ಮ ದೇಶದಲ್ಲಿಯ ಬೇಸಾಯವು ಕೇವಲ ಮಳೆಯ ಮೇಲೆ ಅವಲಂಬಿತವಾಗಿತ್ತು. ನಮ್ಮ ದೇಶದಲ್ಲಿ ಖನಿಜಸಂಪತ್ತು ಇದ್ದರೂ ಅದರ ಉಪಯೋಗವಾಗಿರಲಿಲ್ಲ. ಈ ರೀತಿಯಾಗಿ ಬಡವಾಗಿ ಇದ್ದ ರಾಷ್ಟ್ರವನ್ನು ಸ್ವಾತಂತ್ರ್ಯ ನಂತರ ಸಮೃದ್ಧಿಪಡಿಸುವಲ್ಲಿ ಕೇವಲ 40 ವರ್ಷಗಳಲ್ಲಿ ಅನೇಕ ಸಾಧನೆಗಳನ್ನು ನಮ್ಮ ಸರ್ಕಾರಗಳು ಮಾಡಿ ತೋರಿಸಿದವು. ಆದಾಗ್ಯೂ ಹೊಸ ಜಗತ್ತಿನಲ್ಲಿ ಹೊಸ ಸಮಸ್ಯೆಗಳು ಹುಟ್ಟಿಕೊಂಡಿವೆ, ಪ್ರದೂಷಣೆ ಹೆಚ್ಚುತ್ತಿದೆ. ಜಾತಿಗಳ ಮತ್ತು ಧರ್ಮದ ಮೇಲೆ ಜನರಲ್ಲಿ ವೈಮನಸ್ಸು ಮತ್ತು ದಂಗೆಗಳು ಹೆಚ್ಚುತ್ತಿವೆ. ಮಾನವಕುಲಗಳಲ್ಲಿ ಘರ್ಷಣೆಗಳು ತೋರಿಬರುತ್ತಿವೆ. ಭಾಷಾವಾರ ಸಂಘರ್ಷಣೆಗಳು ನಡೆದಿವೆ. ಪ್ರಾದೇಶಿಕವಾದ ತಲೆ ಎತ್ತಿದೆ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಅನೈಕ್ಯತೆ ತೋರಿಬರುತ್ತಿದೆ. ಈ ಹೊಸ ಸಮಸ್ಯೆಗಳು ಪ್ರಾಕೃತಿಕ ಪ್ರದೂಷಣೆಗಳಾಗದಿದ್ದರೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರದೂಷಣೆಗಳಾಗಿವೆ.

**ಪ್ರಾಕೃತಿಕ ಮತ್ತು ಸಾಮಾಜಿಕ ಪರಿಸರ:**

ಈ ಪ್ರಕಾರವಾಗಿ ನಾವು ಪರಿಸ್ಥಿತಿ ಮತ್ತು ಪರಿಸರ ವಿಜ್ಞಾನಗಳ ಬಗ್ಗೆ

ವಿಚಾರಿಸಿದಲ್ಲಿ ನಮ್ಮ ಪ್ರಾಕೃತಿಕ ಪರಿಸರ ಮತ್ತು ಸಾಮಾಜಿಕ ಇಲ್ಲವೇ ಸಾಂಸ್ಕೃ
ಪರಿಸರವೆಂಬ ವಿಭಾಗಗಳಲ್ಲಿ ಪರಿಸ್ಥಿತಿ ಮತ್ತು ಪರಿಸರವನ್ನು ಅರ್ಥಮಾಡಿಕೊ
ಬೇಕಾಗುತ್ತದೆ. ಸಾಮಾಜಿಕ ಅಥವಾ ಸಾಂಸ್ಕೃತಿಕ ಪರಿಸರದಲ್ಲಿ ಧಾರ್ಮಿಕ ವಿಚಾ
ಗಳಿಗೆ ಮಹತ್ವವಾದ ಒಂದು ಸ್ಥಾನವಿದೆ. ಧರ್ಮವು ಎಲ್ಲ ಮಾನವ ಸಮಾಜಗ
ಕಂಡು ಬರುತ್ತದೆ. ಮಾನವನನ್ನು ಇತರ ಪ್ರಾಣಿಗಳಿಗಿಂತ ಬೇರ್ಪಡಿಸುವ ಧರ
ಮಾನವನು ಧರ್ಮವನ್ನು ತನ್ನ ಶ್ರೇಯಸ್ಸಿಗಾಗಿ ಸೃಜಿಸಿಕೊಂಡಿರುವನೇ ಹೊರ
ತನ್ನ ಅಳಿವಿಗಾಗಿ ಅಲ್ಲ. ಆದರೆ ಒಮ್ಮೊಮ್ಮೆ ಧರ್ಮದ ಹೆಸರಿನಲ್ಲಿ ಘರ್ಷಣೆಗ
ನಡೆದು ಧರ್ಮವು ಮಾನವನ ವಿನಾಶದ ಹಾದಿಯಾಗಿದೆಯೋ ಎನೋ ಎಂ
ಅನಿಸುತ್ತದೆ. ಇದು ಧರ್ಮವನ್ನು ತಿಳಿದುಕೊಳ್ಳದೆ ಧರ್ಮಾಂಧತೆಯನ್ನು ಆಚರಿಸು
ದರಿಂದಲೇ ಹೀಗಾಗುತ್ತದೆ. ಎಲ್ಲ ಧರ್ಮಗಳಲ್ಲಿಯೂ ಉತ್ತಮವಾದ ವಿಚಾರಗಳ
ಆದರೆ ತಮ್ಮ ಧರ್ಮಗಳನ್ನು ಹೀಯಾಳಿಸುವುದು ಇಲ್ಲವೇ ಧರ್ಮವನ್ನು ರಾಜಕೀ
ಕುತಂತ್ರಗಳಿಗೆ ಉಪಯೋಗಿಸುವುದರಿಂಲೇ ಧರ್ಮವನ್ನು ದುರುಪಯೋಗ ಮಾ
ಕೊಳ್ಳಲಾಗುತ್ತಿತ್ತು.

ಈ ರೀತಿಯಲ್ಲಿ ವಿಚಾರಿಸಿದಾಗ ಭಾರತ ದೇಶವು ಧರ್ಮ ನಿರಪೇಕ್ಷ ದೇಶವೆಂ
( Secular country) ಸಾರಲಾಗಿದೆ. ಭಾರತ ದೇಶದಲ್ಲಿ ಕ್ರೈಸ್ತ, ಮುಸಲ್ಮಾ
ಸಿಖ, ಲಿಂಗಾಯತ, ಬುದ್ಧ, ಜೈನ, ಪಾರಶೀ ಮುಂತಾದ ಧರ್ಮಗಳನ್ನು ಆಚರಿಸು
ಜನರು ಇದ್ದಾರೆ. ಪಾಕಿಸ್ತಾನ ಮತ್ತು ಬಂಗ್ಲಾ ದೇಶಗಳಲ್ಲಿಯೂ ಅಲ್ಪಸಂಖ್ಯಾ
ರಿದ್ದಾರೆ. ಆದರೆ ಪಾಕಿಸ್ತಾನವು ತಾನು ಮುಸ್ಲಿಂ ರಾಷ್ಟ್ರವೆಂದು ಹೇಳಿಕೊಂಡದ
ರಾಜಕೀಯದಲ್ಲಿ ಧರ್ಮಕ್ಕೆ ಮಹತ್ವವನ್ನು ಕೊಟ್ಟಂತಾಗಿದೆ. ಈ ಪ್ರಕಾರವಾ
ಕೆಲವು ದೇಶಗಳು 20 ನೆಯ ಶತಮಾನ ಮುಗಿಯುತ್ತಿದ್ದರೂ ಧರ್ಮದ ಆಧಾರ
ಮೇಲೆ ರಾಷ್ಟ್ರ ಕಟ್ಟುವುದನ್ನು ಮತ್ತು ರಾಜರನ್ನು ನಾಮ ಮಾತ್ರವಾಗಿಯಾದರು
ರಾಷ್ಟ್ರಗಳ ಅಧಿಪತಿಗಳನ್ನಾಗಿಸುವದು, ಆ ರಾಷ್ಟ್ರಗಳ ಹಿಂದುಳಿವಿಕೆಯನ್ನ
ತೋರಿಸುತ್ತದೆ.

ಸಾಮಾಜಿಕ ಪರಿಸರದಲ್ಲಿ ಮನುಷ್ಯ ಮತ್ತು ಮನುಷ್ಯರ ನಡುವಿನ ಸಂಬಂ
ಧದ ಬಗ್ಗೆ ವಿಚಾರಿಸಿರೆ ಪ್ರಾಕೃತಿಕ ಪರಿಸರದಲ್ಲಿ ಮನುಷ್ಯ ಮತ್ತು
ಪ್ರಕೃತಿಗಳ ನಡುವಿನ ಸಂಬಂಧದ ಬಗ್ಗೆ ವಿಚಾರ ಮಾಡುತ್ತೇವೆ. ಆದ
ಧಾರ್ಮಿಕ-ಪರಿಸರದ ಬಗ್ಗೆ ವಿಚಾರಿಸಿದಾಗ ಮನುಷ್ಯನು ದೇವರಲ್ಲಿ ಇಟ್ಟ
ನಂಬುಗೆಗಳ ಸಂಸ್ಕೃತಿಗಳ ಸಂಬಂಧದಲ್ಲಿ ನಾವು ವಿಚಾರ ಮಾಡುತ್ತೇವೆ. ಈ
ಪ್ರಕಾರವಾಗಿ ಪರಿಸರವಿಜ್ಞಾನವು ಸಾಮಾಜಿಕ, ಪ್ರಾಕೃತಿಕ ಧಾರ್ಮಿಕ ಇಲ್ಲ

ಾಂಸ್ಕೃತಿಕವೆಂದು ವಿವಿಧ ಪ್ರಕಾರಗಳಲ್ಲಿ ಮಾನವನ-ಪರಿಸರಗಳನ್ನು ವಿಚಾರಿಸ
ೇಕಾಗುತ್ತದೆ.

ಮಾನವನು ಮೂಲತಃ ಪ್ರಾಣಿಯಾಗಿದ್ದರೂ ಉಳಿದ ಪ್ರಾಣಿಗಳಿಗಿಂತ ಅವನು
ುಚ್ಚಮಟ್ಟದವನೂ, ಬುದ್ಧಿಶೀಲನೂ ಆಗಿದ್ದಾನೆ. ಆದರೆ ಅವನು ಮುಖತಃ
ಾಣಿಯಾಗಿದ್ದಾನೆ ಎಂಬುದನ್ನು ಮರೆಯಲಾಗದು. ಮಾನವಶಾಸ್ತ್ರಜ್ಞರು
ುನುಷ್ಯನನ್ನು ವಿವಿಧ ಉಪಕರಣಗಳನ್ನು ತಯಾರಿಸುವ ಪ್ರಾಣಿ ಎಂದುಕರೆದಿದ್ದಾರೆ
ುಳಿದ ಪ್ರಾಣಿಗಳಿಗೆ ಉಪಕರಣಗಳನ್ನು ತಯಾರಿಸಲಿಕ್ಕೆ ಬರುವುದಿಲ್ಲ. ಮನುಷ್ಯನು
ಾಷೆಯ ಮುಖಾಂತರ ತನ್ನ ವಿಚಾರಗಳನ್ನು ಮತ್ತೊಬ್ಬರಿಗೆ ಸಂಪರ್ಕಿಸುತ್ತಾನೆ.
ುಳಿದ ಪ್ರಾಣಿಗಳಿಗೆ ಕ್ಲಿಷ್ಟವಾದ ಭಾಷೆ ಬರದಿದ್ದರೂ ಧ್ವನಿಗಳ ಸಂಕೇತಗಳನ್ನು
ಾಡಬಲ್ಲವು. ಮಾನವನಿಗೆ ಉಳಿದ ಪ್ರಾಣಿಗಳಿಗಿಂತ ಕ್ಲಿಷ್ಟವಾದ ಬುದ್ಧಿಶಕ್ತಿ
ದೆ. ಉಳಿದ ಪ್ರಾಣಿಗಳು ಅಂತರ್‌ಶಕ್ತಿಯ (Instinct) ಮೂಲಕ ಸ್ವಲ್ಪ
್ಯವಹಾರ ಮಾಡುತ್ತಿದ್ದರೂ ಅವುಗಳಿಗೆ ಗಹನವಾದ ಸಂಗತಿಗಳ ಬಗ್ಗೆ ತಿಳುವಳಿಕೆ
ಲ್ಲ ಅವು ಕಲಿಯುತ್ತವೆ. ಕಲಿತದ್ದನ್ನು ಸಂಗ್ರಹಿಸಿ ತಮ್ಮ ಜ್ಞಾನವನ್ನು
ರ್ಧಿಸಿಕೊಳ್ಳುವದಿಲ್ಲ. ಮಾನವನಾದರೋ ತನ್ನ ಜ್ಞಾನವನ್ನು ಅಪರಿಮಿತವಾಗಿ
ಳೆಸಿಕೊಂಡಿದ್ದಾನೆ. ಇತ್ತೀಚೆಗೆ ಅವನು ಗ್ರಂಥ ಭಾಂಡಾರಗಳಲ್ಲಿ ತನ್ನ ಜ್ಞಾನ
ನ್ನು ಸಂಗ್ರಹಿಸಿ ಇಟ್ಟಿದ್ದಾನೆ. ಪ್ರಯೋಗಾಲಯಗಳ ಮೂಲಕ. ವಸ್ತು ಸಂಗ್ರ
ಾಲಯಗಳ ಮೂಲಕ ತನ್ನ ಜ್ಞಾನದ ಭಂಡಾರವನ್ನೇ ಬೆಳೆಸುತ್ತಿದ್ದಾನೆ.

**ರಿಸರ ಮತ್ತು ಮಾನವ ಶಾಸ್ತ್ರ :**

ಹೀಗೆಲ್ಲ ಮಾನವನು ತನ್ನ ಸಂಸ್ಕೃತಿಯನ್ನು ಬೆಳೆಸಿಕೊಂಡಿರುವದರಿಂದಲೇ
ವನು ಉಳಿದ ಪ್ರಾಣಿಗಳಿಗಿಂತ ಉಚ್ಚಮಟ್ಟದವನೂ ಮತ್ತು ಬೇರೆಯೂ ಆಗಿದ್ದಾನೆ.
ಂಸ್ಕೃತಿಯು ಕೇವಲ ಮಾನವ ಪ್ರಾಣಿಯಲ್ಲಿ ಮಾತ್ರ ಕಂಡುಬರುತ್ತದೆ. ಹೀಗೆಲ್ಲ
ರುವಾಗಲೂ ಎಲ್ಲ ಮಾನವರೂ ಒಂದೇ ತೆರನಾಗಿರುವುದಿಲ್ಲ. ಮೊಟ್ಟಮೊದಲಿಗೆ
ಾನವರಲ್ಲಿ ಅನೇಕ ಜನಾಂಗಗಳಿವೆ (Races). ಮಾನವಶಾಸ್ತ್ರಜ್ಞರ ಪ್ರಕಾರ
ಗತ್ತಿನಲ್ಲಿ ಮುಖ್ಯವಾಗಿ ಮೂರ ಜನಾಂಗಗಳಿವೆ. 1) ಬಿಳಿಯಜನಾಂಗ
) ಹಳದಿ ಜನಾಂಗ ಮತ್ತು 3) ಕಪ್ಪು ಜನಾಂಗ. ಯುರೋಪದಲ್ಲಿ ಬಿಳಿ ಮತ್ತು
ಂಪು ಬಣ್ಣದ ಜನರು ವಾಸವಾಗಿದ್ದಾರೆ. ಚೀನದಲ್ಲಿಹಳದಿ ಬಣ್ಣದ ಜನರು ವಾಸವಾ
ದ್ದಾರೆ. ಮತ್ತು ಆಫ್ರಿಕಾದಲ್ಲಿ ಕಪ್ಪುವರ್ಣದ ಜನಾಂಗಗಳು ವಾಸವಾಗಿವೆ. ಕೇವಲ
ಣ್ಣದ ಮೇಲೆ ಮೂರು ಜನಾಂಗಗಳನ್ನು ಮಾಡಿದ್ದರೂ ಅವರ ಅವಯವಗಳ
ಕಾರ. ಎತ್ತರ ಮತ್ತು ಗಾತ್ರಗಳನ್ನೂ ಗಣನೆಗೆ ತೆಗೆದುಕೊಂಡು ಜನಾಂಗಗಳನ್ನು
ಭ್ಯಸಿಸುತ್ತಾರೆ. ಇವರಿಗೆ ಮೂಲತಃ ಶಾರೀರಕ ಮಾನವಶಾಸ್ತ್ರಜ್ಞರೆನ್ನುತ್ತಾರೆ.

ಬಿಳಿಯ ಜನಾಂಗದ ಜನರ ಮೂಗು ಚೂಪಾಗಿದ್ದು. ಕಪೋಲದ ಎಲವು ಉದ್ದವಾಗಿರುತ್ತವೆ. ಅವರ ತುಟಿಗಳು ಕಪ್ಪುವರ್ಣದ ಜನರ ದಪ್ಪವಾದ ತುಟಿಗ ಇರುವುದಿಲ್ಲ. ಕಪ್ಪುವರ್ಣದ ಜನರಲ್ಲಿ (Negro) ನಿಗ್ರಿಟೋ ಜನಾಂಗದ ಕುಳ್ಳರಾಗಿರುತ್ತಾರೆ ಕಪ್ಪು ಜನಾಂದ ಜನರ ಕೂದಲುಗಳು ಗುಂಗುರವಾಗಿರು ಹಳದಿ ವರ್ಣದ ಜನಾಂಗದಲ್ಲಿ ಮೂಗು ಚಪ್ಪಟೆಯಾಗಿದ್ದು ಮುಖವು ದುಂಡನ ಇರುತ್ತದೆ. ಈ ಪ್ರಕಾರವಾಗಿ ಜನಾಂಗಗಳು ವಿಭಿನ್ನವಾಗಿರುವುದಕ್ಕೆ ಮಾನ ಪರಿಸರ ಸಹಸ್ರಾರು ವರ್ಷಗಳಿಂದ ವಿಭಿನ್ನವಾಗಿದ್ದು ಅವರು ತಮ್ಮ ಪರಿಸ ತಕ್ಕಹಾಗೆ ತಮ್ಮ ಕಾಯಗಳನ್ನು ಬೆಳೆಯಿಸಿಕೊಂಡಿರುವರೆಂದು ಜೈವಿಕ-ಶಾಸ್ತ್ರ ಅಭಿಪ್ರಾಯವಾಗಿದೆ.

ಭಾರತೀಯರು ಜನಾಂಗದ ಬಗ್ಗೆ ಹೇಳಬೇಕಾದರೆ ಭಾರತೀಯರು ಮಿಶ್ರಜನಾ ಗದವರೆಂದೇ (Mixed race) ಕರೆಯಲ್ಪಡುತ್ತಾರೆ. ಕ್ರಿ. ಶ.ಪೂರ್ವ 30 ವರ್ಷದ್ದೆಂದು ಹೇಳಲ್ಪಡುವ ಸಿಂಧು ನದೀ ತೀರದಲ್ಲಿದ್ದ ನಾಗರಿಕತೆಯಲ್ಲಿ ಕೂ ಭಾರತೀಯರು ಮಿಶ್ರ ಜನಾಂಗದವರೇ ಆಗಿದ್ದರೆಂದು ಅಲ್ಲಿಯ ಹೂತು ಹೋ ಮಾನವರ ಎಲುವಿನ ಹಂದರಗಳನ್ನು ಅಭ್ಯಾಸ ಮಾಡಿದ ಶಾರೀರಿಕ-ಮಾನ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಈ ಮಿಶ್ರ ಜನಾಂಗ ಭಾರತದಲ್ಲಿ ತಯಾ ಆಗಬೇಕಾದರೆ ಇದಕ್ಕೆ ಕೆಲವು ಕಾರಣಗಳಿವೆ. ಭಾರತಕ್ಕೆ ಪ್ರಾಚೀನ ಕಾಲದಿಂ ಬೇರೆ ಬೇರೆ ಪ್ರದೇಶಗಳ ಜನಾಂಗಗಳು ವಲಸೆ ಬಂದಿರುವುದೇ ಇದಕ್ಕೆ ಕಾರ ವೆಂದು ಹೇಳುತ್ತಾರೆ.

ಮೊದಲನೆಯದಾಗಿ ಭಾರತದ ಪೂರ್ವದಿಂದ ಜಾವಾ. ಇಂಡೋನೇಶಿಯಾ ಕಡೆಯ (Austric) ಆಸ್ಟ್ರಿಕ್ ಜನಾಂಗ ಎಂದು ಹೇಳುವ ಮತ್ತು ಮಲಯಾ ಭಾಷೆಯ ಗುಂಪಿಗೆ ಸೇರಿದ ಜನರು ವಲಸೆ ಬಂದರೆಂದು ಹೇಳಲಾಗಿದೆ. ಇವರ ಭಾರತದಲ್ಲಿ ಮುಂಡಾ-ಕೋಲಾರಿಯನ್ ಜನಾಂಗವೆಂದು ಕರೆಯಲ್ಪಡುತ್ತಾರೆ ಇಂದಿಗೂ ಈ ಭಾಷೆಗಳನ್ನಾಡುವ ಪ್ರತಿಶತ 1ರಷ್ಟು ಜನಾಂಗ ನಮ್ಮ ದೇಶದಲ್ಲಿದೆ ದೇಶದಲ್ಲಿದೆ. ಇವರು ಭಾರತಕ್ಕೆ ವಲಸೆ ಬಂದಾದ ತಮ್ಮ ಸಂಸ್ಕೃತಿ ಮತ್ತು ಜನಾಂಗಿಕ ಅಂಶಗಳನ್ನು ಭಾರತಕ್ಕೆ ತಂದರು ಭಾರತಕ್ಕೆ ಅನೇಕ ಜನಾಂಗಗಳ ಬರಲಿಕ್ಕೆ ಇಲ್ಲಿ ಜನಾಂಗಗಳಿಗೆ ವಾಸಿಸಲಿಕ್ಕೆ ಯೋಗ್ಯವಾದ ಭೂಮಿ, ಜಲ ಮತ್ತು ವಾಯುಗಳಂತಹ ಪರಿಸರಗಳಿರುವುದೇ ಕಾರಣವಾಗಿದೆ.

ಭಾರತದಲ್ಲಿ ವಾಸವಾಗಿರುವ ಮತ್ತೊಂದು ಮಾನವಕುಲವೆಂದರೆ ದ್ರಾವಿಡರದು

ವರು ಭಾರತದ ಪಶ್ಚಿಮದಿಂದ ಹೊರಗಿನಿಂದ ಬಂದವರೆಂದೂ, ಮತ್ತೆ ಕೆಲವು ಾಸ್ತ್ರಜ್ಞರ ಪ್ರಕಾರ ಇವರು ಮೂಲತಃ ಭಾರತ ದೇಶದ ಜನಾಂಗವೆಂದೂ ೀಳುತ್ತಾರೆ. ಈಗ ದ್ರಾವಿಡ ಭಾಷೆಗಳಾದ ಕನ್ನಡ, ತೆಲಗು, ತಮಿಳು ಮತ್ತು ಲೆಯಾಳಿ ಭಾಷೆಗಳು ಮತ್ತು ಇವುಗಳಿಗೆ ಸೇರಿದ ಕೊಡಗು, ತುಳು ಮುಂತಾದ ಪಭಾಷೆಗಳು ದ್ರಾವಿಡರು ಉಳಿಸಿಕೊಂಡಿರುವ ಭಾಷೆಗಳೆಂದು ಹೇಳುತ್ತಾರೆ. ಆಸ್ಟ್ರಿಕ ತ್ತು ದ್ರಾವಿಡರ ನಡುವೆ ಅತಿ ಪ್ರಾಚೀನ ಸಂಪರ್ಕ ಬಂದಿರುವದರಿಂದ ಇವೆರಡು ಾಷೆಗಳನ್ನು ಬೇರ್ಪಡಿಸುವಲ್ಲಿ ಬಹಳ ಕಷ್ಟಕರವಾದ ಕೆಲಸವಾಗಿದೆ. ಇದೇ ಪ್ರಕಾರ ಸ್ಟ್ರಿಕ ಮತ್ತು ದ್ರಾವಿಡರ ಪದಗಳು ಸಂಸ್ಕೃತದಲ್ಲಿ ಸೇರಿಕೊಂಡಿದೆ ಮತ್ತು ಭಾರತದ ಳಿದ ಭಾಷೆಗಳ ಗುಂಪಿಗೆ ಸಂಸ್ಕೃತದ ಪದಗಳು ಸೇರಿಕೊಂಡಿವೆ.

ಸಂಸ್ಕೃತ ಮತ್ತು ಪ್ರಾಕೃತ ಭಾಷಾಗುಂಪು ಭಾರತೀಯ ಆರ್ಯರಿಗೆ ಸೇರಿದ ಾಷಾಗುಂಪಾಗಿದೆ. ಈಗ ಭಾರತದಲ್ಲಿ ಪ್ರಚಲಿತದಲ್ಲಿರುವ ಹಿಂದಿ, ಮರಾಠಿ ಂಗಾಲಿ, ನೇಪಾಳಿ, ರಾಜಸ್ಥಾನಿ, ಪಂಜಾಬೀ ಮುಂತಾದ ಭಾಷೆಗಳು ಭಾರತೀಯ ರ್ಯರಿಗೆ ಸೇರಿದ ಭಾಷಾ ಗುಂಪಾಗಿದೆ. ದಕ್ಷಿಣ ಭಾರತವನ್ನು ಬಿಟ್ಟು ಬಹುತೇಕ ಾರತದಲ್ಲೆಲ್ಲ ಈಗ ಇದೇ ಭಾಷೆಯ ಗುಂಪು ಪ್ರಾಬಲ್ಯ ಪಡೆದಿದೆ. ಭಾರತೀಯ ರ್ಯರ ಭಾಷೆಯ ಗುಂಪು, ಭಾರತೀಯ ಯುರೋಪಿಯನ್ ಗುಂಪಿಗೆ ಸೇರಿದ ುಂಪು. ಈ ಭಾರತೀಯ ಯುರೋಪಿಯನ್ ಭಾಷೆಗಳು ಇಂಗ್ಲೆಂಡಿನಿಂದ ಹಿಡಿದು ೊಂಡು ಭಾರತದ ವರೆಗೆ ಪಸರಿಸಿವೆ ಭಾರತೀಯ ಆರ್ಯರು ಹೊರಗಿನಿಂದ ಬಂದವ ೆಂದು ತಿಲಕರಂತಹ ಮಹನೀಯರು ಒಪ್ಪುವುದಿಲ್ಲ. ಏನೇ ಇದ್ದರೂ ಭಾರತದಲ್ಲಿ ರ್ಯರ ಸಂಸ್ಕೃತಿ ಕ್ರಿ.ಪೂರ್ವ 3000 ವರ್ಷಳಿಂದ ಇರುವುದು ಕಂಡು ಬರುತ್ತದೆ. ವರು ಸಿಂಧೂ ನದಿಯ ಕೊಳ್ಳದ ಸಂಸ್ಕೃತಿಯಲ್ಲಿ ಆಗಲೇ ಪ್ರಭಾವಶಾಲಿಗಳಾಗಲಿಕ್ಕೆ ಪ್ರಾರಂಭಿಸಿದ್ದರೆಂದು ತಿಳಿಯುತ್ತದೆ. ಈ ಪ್ರಕಾರವಾಗಿ ಆರ್ಯರ ಸಂಸ್ಕೃತಿ, ಭಾಷೆ, ಮುಂತಾದವುಗಳು ಭಾರತದಲ್ಲಿ ಪ್ರಭಾವಶಾಲಿಗಳಾದವು.

ಮತ್ತೊಂದು ಗುಂಪು ಭಾರತದಲ್ಲಿ ಚೀನೀ ಮೂಲದ್ದಾಗಿದೆ. ಈ ಹಳದೀವರ್ಣದ ಚೀನಿಯರ ಸಂಪರ್ಕ ಭಾರತದಲ್ಲಿ ಬಹಳ ಪ್ರಾಚೀನವಾದುದಾಗಿದೆ. ಕೌರವರು ಬಿಳಿಯ ರ್ಣದವರೆಂದೂ, ಪಾಂಡವರು ಹಳದೀ ವರ್ಣದವರೆಂದೂ ಕೆಲವರು ಅರ್ಥಮಾಡುತ್ತಾರೆ ನೇ ಅಂದರೂ ಕ್ರಿ ಪೂ. 3000 ವರ್ಷಗಳಿಂದಲೂ ಚೀನಿಯರ ಸಂಪರ್ಕ ಭಾರತದ ಜನಾಂಗಗಳೊಂದಿಗೆ ಸಾಕಷ್ಟು ಪ್ರಮಾಣದಲ್ಲಿ ಪ್ರಾರಂಭವಾಗಿತ್ತು. ಈ ಭಾಷಾಗುಂಪಿಗೆ ಸೇರಿದ ಮಂಗೋಲಿಯನ್ ಜನಾಂಗದವರು ಟೀಬೆಟ, ನೇಪಾಳ, ಬ್ರಹ್ಮದೇಶ ಮತ್ತು ಚೀನಗಳಿಂದ ಭಾರತಕ್ಕೆ ಬಂದವರು. ಕ್ರಿ.ಪೂರ್ವ 5ನೆಯ ಶತಮಾನದಲ್ಲಿ ಬುದ್ಧ ಧರ್ಮವು ಚೀನದಲ್ಲಿ ಪ್ರವೇಶಿಸಿದಾಗ ಭಾರತೀಯ ಸಂಸ್ಕೃತಿಯ ಪ್ರಭಾವ ಚೀನದ ಮೇಲೆ ಬುದ್ಧ ಧರ್ಮದ ಮುಖಾಂತರ ಪಸರಿಸಿತು.

" ಮಾಟಕೂಟ " ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ " ಮಾಡಿದೆ " ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗನು ದೇವಾ.

—ಶ್ರೀ ಬಸವೇಶ್ವರ

## ಭೂಶಕ್ತಿ–ಸಾವಯುವ ಗೊಬ್ಬರ ರೈತರಿಗೆ ಒಂದು ವರದಾನ ಹೇಗೆ?

ಎ.ಜಿ. ಬಸವರಾಜ್, ನಿವೃತ್ತ ನಿರ್ದೇಶಕರು ಉತ್ಪಾದನಾ ನಿರ್ವಾಹಕರು ಎ. ಜಿ. ಇಂಟಿ-
ಗ್ರೇಟೆಡ್ ಫಾರ್ಮ್ಸ್ ಪ್ರೈವೇಟ್, ಲಿ.,

ರಸಾಯನಿಕ ಗೊಬ್ಬರಗಳ ಬೆಲೆ ಗಗನಕ್ಕೇರಿರುವಾಗ ಹಾಗೂ ಈ ಗೊಬ್ಬರಗಳ ನಿರಂತರ ಉಪಯೋಗದಿಂದ ಮಣ್ಣಿನ ಕಣಗಳ ರಚನೆ ಹಾಗೂ ಜೋಡಣೆ ಕೆಟ್ಟು ಅವುಗಳ ನೀರಿಡಿದಿಟ್ಟುಕೊಳ್ಳುವ ಶಕ್ತಿ ಹಾಗೂ ಬೆಳೆಗಳಿಗೆ ಪೋಷಕಾಂಶಗಳನ್ನು ಒದಗಿಸುವ ಶಕ್ತಿ ಕಡಿಮೆಯಾಗಿ ಕ್ರಮೇಣ ಭೂಮಿ ಬಿರುಸಾಗುತ್ತದೆ. ಹೀಗೆಯೇ ಬಿಟ್ಟರೆ ಭೂಮಿ ಕರಕಲಾಗಲು ಪ್ರಾರಂಭವಾಗುತ್ತದೆ. ಕಾರಣ ಭೂಮಿಯು ನೀರು ಹಿಡಿಸಿಯುವ ಶಕ್ತಿ ಕಡಿಮೆಯಾಗುತ್ತದೆ.

ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ಭೂಶಕ್ತಿ–ಸಾವಯುವ ಗೊಬ್ಬರದ ಉಪಯೋಗ ರೈತರಿಗೆ ಒಂದು ವರದಾನವೆಂದೇ ಹೇಳಬಹುದು. ಈ ಭೂಶಕ್ತಿ ಒಂದು ಸತ್ವ ಇರುವ ಸಾವಯುವಗೊಬ್ಬರ, ಇದು ಮಣ್ಣಿನ ಗುಣಧರ್ಮಗಳನ್ನು ಸುಧಾರಿಸುವುದರ ಜೊತೆಗೆ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವುದು. ಇದು ಮಣ್ಣಿನಲ್ಲಿಯ ಸೂಕ್ಷ್ಮ ಜೀವಿಗಳ ಬೆಳವಣಿಗೆಯಲ್ಲಿ ಹೆಚ್ಚು ಪರಿಣಾಮವನ್ನು ಬೀರುತ್ತದೆ. ಇದು ಬೆಳೆಗಳ ಬೆಳವಣಿಗೆಗೆ ಬೇಕಾದ ಸಾರಜನಕ, ರಂಜಕ, ಪೊಟಾಷ್‌ಗಳನ್ನು ಒದಗಿಸುವುದಲ್ಲದೆ ಇನ್ನಿತರ ಎಲ್ಲಾ ಲಘು ಪೋಷಕಾಂಶಗಳನ್ನು ಒದಗಿಸುತ್ತದೆ. ಇದು ಕೃಷಿ ತಜ್ಞರಿಂದ ತಯಾರಿಸಲ್ಪಟ್ಟು, ನುಣ್ಣನೆಯ ಪುಡಿಯಂತದ್ದು ನೀರಿನಲ್ಲಿ ಚೆನ್ನಾಗಿ ಕರಗಿ, ಮಂದ ಗತಿಯಿಂದ ಪೋಷಕಾಂಶಗಳನ್ನು ಒದಗಿಸಿ ಅಧಿಕ ಇಳುವರಿಗೆ ಪ್ರಯೋಜನಕಾರಿಯಾಗಿದೆ. ಇದರ ಇನ್ನೊಂದು ಮುಖ್ಯ ಗುಣವೆಂದರೆ ಇದರ ಉಪಯೋಗದಿಂದ ಬೆಳೆಗಳಿಗೆ ಯಾವರೀತಿಯ ತೊಂದರೆಯೂ ಆಗುವುದಿಲ್ಲ. ಜೊತೆಗೆ ಇದರಿಂದ ಬೆಳೆದ ಬೆಳೆಗಳ ರೋಗ ಕೀಟಗಳ ಉಪದ್ರವವನ್ನು ಪರಿಣಾಮಕಾರಿಯಾಗಿ ಎದುರಿಸುವ ಸಾಮರ್ಥ್ಯ ಹಾಗೂ ರೋಗ ಹೊಂದಿರುವುವು.

**ಉಪಯೋಗಿಸುವ ವಿಧಾನ:**

ಖುಷ್ಕಿ ಬೇಸಾಯದ ಬೆಳೆಗಳಿಗೆ ಪ್ರತಿ ಎಕರೆಗೆ 200 ಕೆ. ಜಿ. ಯನ್ನು ಬಿತ್ತನೆಯ ಪೂರ್ವ ಎರಡು ವಾರಗಳ ಮೊದಲೆ ಹಾಕಿ ಚೆನ್ನಾಗಿ ಮಣ್ಣಿನಲ್ಲಿ ಬೆರಸಬೇಕು.

ನೀರಾವರಿ ಬೆಳೆಗಳಿಗೆ, ಪ್ರತಿ ಎಕರೆಗೆ 150 ಕೆ. ಜಿ.ಯಂತೆ ಬಿತ್ತನೆಯ ಪೂರ್ವದಲ್ಲಿ ಹಾಗೂ 150 ಕೆ. ಜಿ.ಯನ್ನು 45 ದಿವಸಗಳ ನಂತರ ಮತ್ತೊಮ್ಮೆ ಉಪಯೋಗಿಸಬೇಕು.

ತೋಟದ ಬೆಳೆಗಳಿಗೆ ಮೊದಲನೇ ಕಂತನ್ನು ಹೂ ಬಿಡುವ ಮುನ್ನ ಎಕರೆಗೆ 150 ಕೆ. ಜಿ. ಯಂತೆ ಮತ್ತು ಹೂ ಬಿಡುವ ಮತ್ತು ಕಾಯಿಯಾಗ ಸಮಯದಲ್ಲಿ ಎರಡನೆಯ ಸಾರಿ ಪ್ರತಿ ಎಕರೆಗೆ 150 ಕೆ. ಜಿ. ಯಂತೆ ಕೊಡುವು

ಪ್ಲಾಂಟೇಶನ್ ಬೆಳೆಗಳಿಗೆ ಮಳೆ ಬರುವ ಮುಂಚೆ ಪ್ರತಿ ಗಿಡಕ್ಕೆ 5 ಕೆ. ಯಂತೆ ವರ್ತುಲಾಕಾರದ ಪಾತಿಗಳಲ್ಲಿ ಕೊಡಬೇಕು. ಎರಡನೆಯ ಕಂತನ ತಿಂಗಳ ಬಳಿಕ ಮತ್ತೊಮ್ಮೆ 5 ಕೆ. ಜಿ. ಯಂತೆ ಹಾಕಬೇಕು.

ಈ ಮೇಲ್ಕಂಡ ಶಿಫಾರಸುಗಳನ್ನು ಸಾಮಾನ್ಯ ಮಣ್ಣಿನ ಗುಣಧರ್ಮ ಮೇಲೆ ಹಾಗೂ ಪ್ರಚಲಿತ ವ್ಯವಸಾಯ ಕ್ರಮಗಳ ಮೇಲೆ ಮಾಡಲಾಗಿದೆ.

**ತೆಂಗಿಗೆ ಬೀಳುವ ಕಪ್ಪುತಲೆ ಹುಳುವಿನ ಬಾಧೆಯನ್ನು ನಿಯಂತ್ರಿಸು**

ಈಚಿನ ದಿನಗಳಲ್ಲಿ ತೆಂಗಿಗೆ ಬೀಳುವ ಕಪ್ಪುತಲೆ ಹುಳುವಿನ ಬ ಹೆಚ್ಚಾಗುತ್ತಿದೆ. ಈ ಹುಳುಗಳು ತೆಂಗಿನ ಗರಿಗಳಲ್ಲಿನ ಹಸಿರು ಭಾಗವನ್ನು ಕೆರ ಗರಿಗಳನ್ನು ಹಾಳುಮಾಡುವುದರಿಂದ ಗಿಡಗಳ ಬೆಳವಣಿಗೆ ಕುಂಠಿತವಾಗಿ ಫ ಕಡಿಮೆಯಾಗುತ್ತದೆ. ಜೊತೆಗೆ ಈ ಕೀಟವನ್ನು ಸರಿಯಾದ ಸಮಯದ ಹತೋಟಿ ಮಾಡದಿದ್ದಲ್ಲಿ ಇವರ ಉಪದ್ರವ ಬಹುಬೇಗ ಅಕ್ಕಪಕ್ಕದ ತೋ ಹಬ್ಬಿ ತೆಂಗಿನ ಬೆಳೆಗೆ ಬಹಳ ಅಪಾಯಕಾರಿಯಾಗುತ್ತದೆ.

**ಈ ಕೀಟದ ಬಾಧೆಯನ್ನು ತಡೆಯಲು ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕು**

ಬೇಸಿಗೆಯಲ್ಲಿ ಎಲ್ಲಾ ತೆಂಗಿನ ಗರಿಗಳನ್ನು ಪರೀಕ್ಷಿಸಿ ಅಂದರೆ ಕೆ ಗರಿಗಳ ಮಧ್ಯಭಾಗದಿಂದ ಮೇಲಿನ ಗರಿಗಳಲ್ಲಿ ಕಾಣಿಸಿಕೊಳ್ಳುವ ರಸಹೀರು ಗರಿ ಒಣಗುವಿಕೆ ಹಾಗೂ ಗರಿಗಳ ಅಡಿಯಲ್ಲಿರುವ ರೇಷ್ಮೆಯಂತಹ ಬಲೆ ಜಾಡಿ ಗರಿಗಳನ್ನು ಉದ್ದನೆಯ ಬೊಂಬಿಗೆ ಕಟ್ಟಿರುವ ಹರಿತವಾದ ಕತ್ತಿಯಿಂದ ಕತ ಅವುಗಳನ್ನು ಒಂದು ಕಡೆ ಹಾಕಿ ಸುಡುವುದು.

ಈ ಹಾವಳಿಗೆ ಒಳಗಾದ ಮತ್ತು ಪಕ್ಕದ ಗಿಡಗಳಿಗೆ ಶೇಕಡಾ 0. ಬಿ. ಹೆಚ್. ಸಿ 50 ಪಟ್ಟೆಬಲಿ ಪೌಡರ್ ಅಥವಾ ಶೇಕಡಾ 0.05 ರ ಮೆಲಾಥಿ ಅಥವಾ ಶೇ. 0.40 ರ ಮಾನೋಕ್ರೊಟೊಪಾಸ್ ಅನ್ನು ಯಂತ್ರಚಾ ಸ್ಪ್ರೆಯರುಗಳಿಂದ ಗರಿಗಳ ತಳಭಾಗಕ್ಕೆ ತಲುಪುವಂತೆ ಸಿಂಪಡಿಸಬೇಕು.

ಕೀಟಗಳ ಹಾವಳಿ ಹೆಚ್ಚಾಗಿದ್ದಲ್ಲಿ, ಬಹು ಎತ್ತರದ ಗಿಡಗಳಿಗೆ ಸಿಂಪರಣೆ ಕಷ್ಟ
ದ್ದರಿಂದ ಮೊನೊಕ್ರೊಟೋಫಾಸ್‌ನ್ನು [36%] ಗಿಡಗಳ ವಯಸ್ಸಿಗೆ ತಕ್ಕಂತೆ
18 ಮಿ. ಲೀ ಮತ್ತು ಸಮಪ್ರಮಾಣದಲ್ಲಿ ನೀರನ್ನು ಮಿಶ್ರಮಾಡಿ, ಗಿಡದಕಾಂಡ
ಥವಾ ಬೇರಿನ ಮುಖಾಂತರ ಕೊಡುವುದರಿಂದ ಕೀಟವನ್ನು ಪರಿಣಾಮಕಾರಿ
ಾಗಿ ನಿಯಂತ್ರಿಸಬಹುದು. ಈ ರೀತಿ ಔಷಧಿ ಕೊಟ್ಟ ಗಿಡಗಳಲ್ಲಿನ ಕಾಯಿ
ಥವಾ ಎಳೆ ನೀರನ್ನು 45 ದಿನಗಳವರೆಗೂ ಉಪಯೋಗಿಸಬಾರದು.

ಇನ್ನೊಂದು ಮುಖ್ಯವಾದ ಹತೋಟಿ ಕ್ರಮವೆಂದರೆ, ಈ ಕಪ್ಪುತಲೆ ಹುಳು-
ನ್ನು ತಿನ್ನುವ ಪರೋಪಜೀವಿಗಳನ್ನು ಅಂದರೆ ಗೋನಿಯೋಜನ ನೆಫ್ಯಾಂಟಿಡೀಸ್
ಗೂ ಬ್ರೆಕಾನ್ ಜ್ರವಿಕಾರ್ನಿ ಇವುಗಳನ್ನು (2000 ದಿಂದ 2,400 ಜೀವಿಗಳನ್ನು
ದು ಎಕರೆಗೆ) ಸುಮಾರು 50 ರಿಂದ 100 ಜೀವಿಗಳನ್ನು ಒಂದು ಗಿಡಕ್ಕೆ
ಡುವುದರಿಂದ ಈ ಕಪ್ಪು ತಲೆ ಹುಳುಗಳನ್ನು ತಿಂದು ಇವುಗಳ ವೃದ್ಧಿಯನ್ನು
ಶಪಡಿಸಬಹುದು.

# ಯಾವುದು ಶ್ರೇಷ್ಠ ?

## ಬಾಬರೀ ಭಕ್ತಿಯೋ ? ........ ರಾಮಭಕ್ತಿಯೊ ?

ಮಂದಾಕಿನಿ ದೇವಿ, ಕಾರ್ಯದರ್ಶಿ 'ಜೀವನ ಜ್ಯೋತಿ', ಮಾನವತಾಪ್ರತಿಷ್ಠಾನ, ಧಾರವಾಡ.

ದೇವನೊಬ್ಬ-ನಾಮ ಹಲವು. ಆಭಗವಂತನ ನಾಮ ಯಾವಾಗ ಯಾರನ್ನು ಒಲಿಯುವುದೊ ಹೇಳಲಾಗದು. ಶಿವ--ಶಿವ ಎನ್ನುವವರು ಕೇಶವ ಎನ್ನುವರನ್ನೂ ಕೇಶವ-ಕೇಶವ ಎಂದು ಜಪಿಸುವವರು ಶಿವ-ಶಿವ ಎನ್ನುವವರನ್ನು ಎಷ್ಟೇ ದ್ವೇಶಿಸಿದರೂ ಅಲ್ಲಿ ಆ ಇಬ್ಬರೂ ಇರುವುದೇ ಇಲ್ಲ! ಆ ದೇವರುಗಳು .(ಎಂದರೆ ಆ ದೈವ ಶಕ್ತಿ) ಎಂಥ ಭಕ್ತರಿಗೆ ಒಲಿಯುತ್ತಾರೆಂದರೆ ಧರ್ಮಿಷ್ಠರು ಆಚ್ಚರಿ ಪಡಬೇಕು! ಹಿಂದೂ-ಗಳಲ್ಲಿಯೇ ಇಷ್ಟೊಂದು ಭೇದ-ಭಾವ ಇರುವಾಗ ಹಿಂದು-ಮುಸ್ಲಿಮ್‌ರಲ್ಲಿ ಇನ್ನೆಷ್ಟು ಇದ್ದೀತು! ಎಂದು ಹೇಳುವ ಪಾಖಂಡಿಗಳ ಮಾತು ಶತಶ: ಸುಳ್ಳು. ಬಹಳ ಹಿಂದೆ ಪತ್ರಿಕೆಯಲ್ಲಿ ನಾನು ಓದಿದ ಸುದ್ದಿ-ಮುಸ್ಲಿಮ್ ಭಕ್ತನೊಬ್ಬ ಶ್ರೀ ಚಾಮುಂಡಮ್ಮನ ಧ್ಯಾನದಲ್ಲಿ ಬೆಟ್ಟದ ತಪ್ಪಲಿನಲ್ಲಿ ಗುಡಿಸಲು ವಾಸಿಯಾಗಿದ್ದಲ್ಲದೆ ಸಾಮಾನ್ಯರಿಗೆ ಸಾಂತ್ವನದ ಮಾರ್ಗದರ್ಶಿ ಆಗಿರುವಷ್ಟು ಆಧ್ಯಾತ್ಮ ಶಕ್ತಿ ಪಡೆದಿದ್ದ ! ಪ್ರತಿಯಾಗಿ ಹಿಂದುಗಳು ಫಕೀರಸಾಬನ ಭಕ್ತರಾಗಿ ಆದರಲ್ಲಿಯೂ ಮಕ್ಕಳಾಗದವರು "ನನಗೊಂದು ಮಗುವನ್ನು ದಯಪಾಲಿಸು ನಿನ್ನ ಹೆಸರಿಡುವೆ" ಎಂದು ಪ್ರಾರ್ಥಿಸಿಕೊಂಡವರ ಮಗು ಫಕೀರಪ್ಪ ಎಂದು ಹೆಸರು ಪಡೆಯಿತು. ಉತ್ತರಕರ್ನಾಟಕದಲ್ಲಿ ಇಂಥ ಉದಾಹರಣೆಗಳು ಹೇರಳ. ಅಷ್ಟೇ ಅಲ್ಲ, ಮುಸ್ಲಿಮ್ ಬಾಂಧವರ ಹಿರಿಯ ಮೊಹರಮ್ ಹಬ್ಬದಲ್ಲಿ ಅನೇಕ ಹಿಂದುಗಳು ವೇಶ ಹಾಕಿಕೊಂಡು ಕುಣಿಯುವ ಹರಕೆ ಹೊತ್ತಿರುತ್ತಾರೆ. ಅಂದು ಬ್ರಾಹ್ಮಣರೂ ಸೇರಿದಂತೆ ಅನೇಕ ಹಿಂದೂ ಸೋದರ-ಸೋದರಿಯರು 'ಅಲ್ಲಾ'ನನ್ನು ಅಲಾದೇವರೆಂದು ಕರೆದು ಸಕ್ಕರೆ ಓದಿಸಿ (ನಿವೇದಿಸಿ)ಪ್ರಸಾದ ಪಡೆಯುತ್ತಾರೆ. ಇದೀಗ ನಡೆದು ಹೋದ ಉತ್ತರಪ್ರದೇಶದ ಅವಾಂತರದಿಂದಾಗಿ ಪರಿಣಮಿಸಿದ ಅನಾಹುತಗಳಲ್ಲಿ ನಾಶಗೊಂಡ ಹಿಂದೂ ದೇವಾಲಯವನ್ನು ಮತ್ತೆ ನಿರ್ಮಿಸಲು ಮುಸ್ಲಿಮರೂ ಹಿಂದುಗಳೊಂದಿಗೆ ಸೇರಿದ ಸಂಗತಿ ಸವಣೂರಿನಲ್ಲಿ ನಡೆಯಿತು ! ಅವರಾರೂ ಬಾಬರಿ....ರಾಮ ಎಂದು ಜಗಳಾಡುವವರನ್ನು ಕೇಳಲೇ ಇಲ್ಲ ! ಒಟ್ಟಿನಲ್ಲಿ ಈ ಜಗಳ ಬರೀ ಸಂಪ್ರದಾಯದ್ದು. ಭಕ್ತಿಗೂ ಸಂಪ್ರದಾಯಕ್ಕೂ ಸಂಬಂಧವೇ ಇಲ್ಲ. ಆದರೂ ಸಾಮಾನ್ಯರಿಗೆ ಸಂಪ್ರದಾಯಗಳ ಕಡಿವಾಣ ಬೇಕು ನಿಜ. ಹಾಗೆಂದು 'ನಮ್ಮ ಧರ್ಮ -- ನಮ್ಮ ದೇವರೇ ಶ್ರೇಷ್ಠ ಅದನ್ನೇ ಸ್ವೀಕರಿಸಿ ಪೂಜಿಸಿ ಎಂದು ಪರಧರ್ಮಿಯರನ್ನು ಒತ್ತಾಯಿಸಿದರೆ ಅಲ್ಲಿ ಮೂಡುವುದು ತಿರಸ್ಕಾರವೇ ಹೊರತು ಭಕ್ತಿದೂರ ಓಡಿ ಹೋಗುತ್ತದೆ, ಜಾತಿ ಯಾವುದೇ ಆದರೂ ಆಯಾ ಸಂಪ್ರದಾಯಗಳಿಂದ ಆತ್ಮ ಸಂಸ್ಕಾರ ಸಿಗಬಹುದೇ ಹೊರತು ಆತ್ಮ ವಿಕಾಸ ಸಾಧ್ಯವಿಲ್ಲ.

ಇವರಾರು ?

ಭಾರತದಲ್ಲಿ ಹಿಂದೂಗಳೊಂದಿಗೆ ಮುಸ್ಲಿಮರು-ಕ್ರೈಸ್ತರು-ಬೌದ್ಧರೂ ಇದ್ದಾ
ಇವರೆಲ್ಲ ಯಾರು ? ಭಾರತೀಯರಲ್ಲವೆ ? ನಮ್ಮ ಕರ್ನಾಟಕದಲ್ಲಿ ಅಂತೂ ಸಾಮಾ
ಸ್ತ್ರೀ ಪುರುಷರ ವೇಶದಲ್ಲಿ ವ್ಯತ್ಯಾಸವಿದೆಯೆ ? ಮುಸ್ಲಿಮ್ ಮಹಿಳೆಯರಿಗೂ ಕರಿಮ
ಕಾಲುಂಗುರ ಉಂಟು-ಇತ್ತೀಚೆಗಂತೂ ಕ್ರಿಶ್ಚಿಯನ್ ಮಹಿಳೆಯರೂ ನೀಟಾಗಿ ಚಿನ್ನ
ಸುತ್ತಿದ ಎರಡು ಬಟ್ಟಲುಗಳುಳ್ಳ ಕರಿಮಣಿ ಸ್ವೀಕರಿಸಿದ್ದಾರೆ! "ಇದು ಭಾರತೀ
ಸಂಸ್ಕೃತಿ ನಾವು ಭಾರತೀಯರು." ಎಂದು ಅಭಿಮಾನದಿಂದ ಹೇಳುವ ಅವರ ಮಾ
ನಮ್ಮ ಹಿಂದೂ ಸಂಪ್ರದಾಯಕ್ಕೆ ಶರಣಾದರೆಂದು ಬೀಗ ಬೇಕೆ? ಅಥವಾ ಅ
ಉದಾತ್ತ ಭಾವನೆಗೆ ತಲೆದೂಗಬೇಕೆ? ಅಷ್ಟಕ್ಕೂ ಇವರಾರು? ಪರಕೀಯರ ಭಾಳ
ಕಾಲದಲ್ಲಿ ಮತಾಂತರ ಹೊಂದಿದವರು ತಾನೇ? ಆ ಧರ್ಮ ಸ್ವೀಕರಿಸಿದ ನಂತರ ಆ
ಸಂಪ್ರದಾಯಕ್ಕೆ ಬದ್ಧರು. "ಸ್ವಧರ್ಮೆ ನಿಧನಂ ಶ್ರೇಯಃ" ಎನ್ನುವುದು ಎಲ್ಲ ಧ
ಮತದವರಿಗೂ ಅನ್ವಯಿಸುತ್ತದೆ. ಒಂದು ಕಾಲವಿತ್ತು--ಯಾವ-ಒಬ್ಬ ಅಧಿಕಾರಿ
ಅತಿಥಿಯಾಗಲಿ ಊರಿಗೆ ಬಂದರೆ ಆತನ ಮತಸ್ಥರಿಂದಲೇ ಅಡಿಗೆ ಮಾಡಿಸಿ ಉಣಿ
ತಿದ್ದರು. ಅದೂ ಪ್ರೀತಿಯಿಂದ. ಇದು ಸತ್ಸಂಪ್ರದಾಯ. " ಆ ಮೇಲ್ಜಾತೀಯ
ನಮ್ಮಲ್ಲಿ ಚಾ ಕುಡಿದು ಹೋದ"! ಎಂದು ಕುಚೇಷ್ಟೆಯಿಂದ ಬೀಗಿದರೆ? ಅ
ಅತ್ಯಂತ ಕೆಟ್ಟ ಸಂಪ್ರದಾಯ. ಅಲ್ಲಿ ಧರ್ಮವೂ ಇಲ್ಲ. ಇಂಥ ಪ್ರವೃತ್ತಿ ಈಗ ಹೆಚ್ಚಾ
ಇದಕ್ಕೇನು ಕಾರಣ?

## ಮನುಷ್ಯತ್ವಕ್ಕೆ ಅಳತೆಗೋಲು? ಹಣವೆ?

ಬಸುಬಸುತ್ತ ಗುಣಕ್ಕಿಂತಲೂ ಹಣವೇ ವ್ಯಕ್ತಿತ್ವದ ಅಳತೆಗೋಲಾಗಿದೆ! ಇದು ಸರಕಾ
ದಿಂದ ಸಮಾಜಕ್ಕೆ ದೊರೆತ ದೊಡ್ಡ ದೇಣಿಗೆ! ಸಮಾಜದಲ್ಲಿ ಯಾವಕಾಲಕ
ಹಿಂದುಳಿದವರು ಅಜ್ಞಾನಿಗಳೇ ಬಹುಸಂಖ್ಯರು. ಇಂಥ ದಲಿತರು ತೋಳಬಲವಿದ್ದರ
ದುರ್ಬಲರು, ಕಾರಣ ಇವರಲ್ಲಿ ಹಣವಿಲ್ಲ.(ಲಂಚಕೊಟ್ಟು ಅಪರಾಧಗಳಿಂದ ಪಾರಾಗ
ಆದುದರಿಂದ ಸರಕಾರದ ಸೌಲತ್ತುಗಳೊಂದಿಗೆ ಪದಾಧಿಕಾರ-ಪಡೆದು ಸಂಕಾರವನ
ವಂಚಿಸಿದರೆ ಮನೆ ತುಂಬ ಹಣವೇ ಹಣ-ಪ್ರತಿಯಾಗಿ ಸೌಲತ್ತುಗಳಿಂದ ವಂಚಿತ
ದವರು ಬುದ್ಧಿವಂತರು ಪ್ರತಿಭಾವಂತರಾಗಿದ್ದರೂ ದುರ್ಬಲವರ್ಗದವರ ಕೈಕೆಳ
ದುಡಿಯುವಂತಾದಾಗ ಸಮಾಜದಲ್ಲಿ ಜ್ಞಾನಗೌರವ-ಗುಣಗೌರವ ವಯೋಗೌ
ಭಾವನೆ ಎನ್ನುವುದು ಶುದ್ಧ ಕಳಪೆಯ ಕಂದಾಚಾರ! ಆದುದರಿಂದ ಪ್ರತಿಭಾವ
ಯುವ ಜನಾಂಗ ತಮ್ಮ ವ್ಯಕ್ತಿತ್ವವನ್ನು ರೂಪಿಸಿ ಕೊಳ್ಳುವುದರೊಂದಿಗೇ ದೇಶಕಟ್ಟು
ಹಿರಿಯಗುರಿ ಮರೆವಾಗಿ ಪ್ರತಿಯೊಬ್ಬರ ಕಣ್ಣುಮುಂದೆ ಕಾರು, ಬಂಗಲೆ! (ಸರಕಾ
ಜಾಹಿರಾತುಗಳೂ ಹಾಗೇ ಇರುತ್ತವೆ!) ಅದಕ್ಕಾಗಿ ಹೇಗಾದರೂ ಸರಿ, ಜೇಬುಕತ್ತರಿ
ಯಾದರೂ ಹಣಗಳಿಸಿ ಗಣ್ಯರಾಗಬೇಕೆಂಬ ಓಟದಲ್ಲಿ ಗೆದ್ದವರೆಷ್ಟು? ಸೋತವ

ಚ್ಚು. ಪರಿಣಾಮ ಗುಣ ಮತ್ತು ಹಣಇಲ್ಲದವರು ಉಳ್ಳವರನ್ನು ಕಂಡು ಕರುಬು
ಚ್ಚು. ದ್ವೇಷ ಆಕ್ರೋಶ. ಇಂಥ ಅತೃಪ್ತರು ಸರಕಾರ ಕರೆದಿರುವ ದಲಿತ ದುರ್ಬಲರ
ಯೇ ಹೆಚ್ಚು. ವಿವೇಕವಿಲ್ಲದ ಇಂಥವರು ಕಾರಣವಿಲ್ಲದೆ ಅಥವಾ ಕ್ಷುಲ್ಲಕಕಾರಣದಿಂದ
ಕ್ತಿ-ವ್ಯಕ್ತಿಗಳಲ್ಲಿ ಪರಸ್ಪರ ದ್ವೇಷ ಬೆಳೆಸಿಕೊಂಡು ಸೇಡಿಗಾಗಿ ಕಾದಿರುವಾಗ
ಾಬರಿ-ರಾಮಗಳ ಘಟನೆಗಳು ಉತ್ತಮ ಅವಕಾಶ ಕಂಡವರ ತಲೆ ಉರುಳಿ ಮನೆ
ಷಣವಾಗಿ ಪರಿಹಾರದ ಹೆಸರಿನಲ್ಲಿ ಸರಕಾರಿ (ಅರ್ಥಾತ್‌ಪ್ರಜೆಗಳದೆ) ಹಣದ
ೊಳೆಹರಿಯುವುದು ಎಲ್ಲವ್ಯೂ ವ್ಯರ್ಥ. ಅತೃಪ್ತರು ಮಾತ್ರ ಇಂಥ ಇನ್ನೊಂದು ಅವಕಾಶ
ಗಿ ಕಾದು ಕುಳಿತಿರುತ್ತಾರೆ. ಕಾರಣ ಅವರು ಬರೀ ಭೋಗ ಪ್ರಿಯರಾಗಿ ಹಣವೊಂದ
ೇ ನಂಬಿ ತನ್ನವರೆಂಬುವವರನ್ನು ಕಳೆದುಕೊಂಡ ಅನಾಥಪ್ರಜ್ಞರು! ಇಂಥವರಿಗೆ
ೇವರು ಧರ್ಮ ಯಾವಲೆಕ್ಕ? ...ಇಂಥ ಪ್ರಜ್ಞೆ ಜಾತಿ-ಮತ ಭೇದವಿಲ್ಲದೆ ಎಲ್ಲೆಲ್ಲಿಯೂ
ಂಬಿ ತುಳುಕುತ್ತಿದೆ.

ಸುಸಂಸ್ಕೃತನಾದ ಒಬ್ಬ ಬರಿಗೈಯ ಬುದ್ಧಿವಂತನನ್ನು ಅಸಂಸ್ಕೃತ ಅವಿವೇಕಿ
ಡ್ಡ ತನ್ನ (ಕಳ್ಳ) ಹಣದ ಬಲದಿಂದ ಕೆಳಕಿದರೆ - ಓಯಾಳಿಸಿದರೆ ಏನಾಗುತ್ತದೆ?
ಂಥ ಪ್ರಸಂಗದಲ್ಲಿ ಬೇರೆ ಬೇರೆ ಜಾತಿಯಾದರಂತೂ ಆ ದ್ವೇಷ ಇನ್ನೂ ಪ್ರಬಲ
ಾಗುತ್ತದೆ. ಒಂದೇ ಜಾತಿ-ಮತ ಸಹಿತ ಇಂಥ ಅಸೂಯೆಗೆ ಅಡ್ಡಬರುವುದಿಲ್ಲ.
ಷ್ಟೇ ಏಕೆ? ಒಡಹುಟ್ಟಿದವರಲ್ಲಿನ ಹೊಟ್ಟೆ ಕಿಚ್ಚನ್ನು ಅವರ ರಕ್ತಸಂಬಂಧ ತಡೆ
ಲಾರದು. ಆದುದರಿಂದಲೇ ಬಹುಸಂಖ್ಯಾರಾದ ಇಂಥ ಅಪರಿಪಕ್ವರು ತಮ್ಮ
ಾನಸಿಕ ದೌರ್ಬಲ್ಯದಿಂದ ಹಾಳಾಗದಿರಲೆಂದು ದೇವರು, ಧರ್ಮದ ಬಗೆಗೆ ಭಯ
ಕ್ತಿ ಬೆಳೆದು ಸಮಾಜದಲ್ಲಿ ಜ್ಞಾನ-ಗೌರವ; ಗುಣ-ಗೌರವ; ವಯೋಗೌರವ
ಾವನೆ ನೆಲೆಗೊಳ್ಳಲೆಂದೇ ದೈವೀಶಕ್ತಿಯ ಪ್ರತೀಕಗಳನ್ನು ನಿರ್ಮಿಸಿದರೇ ಹೊರತು,
ತೀಕಗಳನ್ನು ಕಟ್ಟಿಕೊಂಡು ಕಚ್ಚಾಡುವುದಕ್ಕಲ್ಲ. ಉನ್ನತ ಅಧಿಕಾರದಲ್ಲಿರುವ
ುಸ್ಲಿಮ್ ಸೋದರರೊಬ್ಬರು ಕೇಳುವ ಪ್ರಶ್ನೆ ಇದು —— ಬಾಬರಿ ಮಸೀದಿಯನ್ನು
ಾಶಪಡಿಸುವುದನ್ನು ಆ ಮಸೀದಿಯಿಂದ ಅಲ್ಲಾ ಏತಕ್ಕೆ ಎದ್ದು ಬಂದು ತಡೆಯಲಿಲ್ಲ?
——ಅದೆಲ್ಲ ದೊಡ್ಡವೇದಿಕೆಯ ಮೇಲಿನ ರಾಜಕೀಯ ಪುಂಡಾಟ — ಎಲ್ಲರಿಗೂ
ಮ್ಮದೆ ನಡೆಯಬೇಕೆಂಬ ಹಟಮಾರಿತನ ಅದು ಅಯೋಧ್ಯೆಯ ಮಟ್ಟಿಗೆ ಸೀಮಿತವಾದ
ಥೆ——ಆದರೆ ನಿಜವಾದ ಕಥೆ ಇದು.

# ಯುವಜನರಲ್ಲಿ ಲೈಂಗಿಕ ಪರಿಜ್ಞಾನ :

ಡಾ : ಕಾಮಿನಿ ಎ. ರಾವ್

ಭಾರತೀಯ ಜನ ಜೀವನದಲ್ಲಿ ಲೈಂಗಿಕತೆಯನ್ನು ಕುರಿತು ಚಿಂತಿಸುವಾಗ ಒಂದು ಪರ್ಯಾಸ ಎದ್ದು ಕಾಣುತ್ತದೆ. ಅಂದರೆ ಲೈಂಗಿಕತೆ ಇಲ್ಲಿ ಎಷ್ಟು ಬಾಹ್ಯವೋ ಷ್ಟೇ ಗೌಪ್ಯ. ಶತಮಾನಗಳ ಹಿಂದೆಯೇ ಲೈಂಗಿಕ ಶಾಸ್ತ್ರ ಕ್ರಮಬದ್ಧವಾಗಿ ಬೆಳೆದು ತ್ಸ್ಯಾಯನದ "ಕಾಮಶಾಸ್ತ್ರ" ದಂಥ ಪ್ರೌಢ ಕೃತಿ ಸೃಷ್ಟಿಯಾಗಿದೆ. ಕಾಮಶಾಸ್ತ್ರದ ದ್ಧಾಂತ ಪ್ರಯೋಗಗಳೆಂಬಂತೆ ಭಾರತೀಯ ಶಿಲ್ಪ ಕಲೆಯಲ್ಲಿ ಲೈಂಗಿಕತೆ ಕೆಲವೆಡೆ ೀರಾ ಸ್ಪಷ್ಟವಾಗಿ ವ್ಯಕ್ತವಾಗಿದೆ. ಕಾರಣಗಳೇನೇ ಇರಲಿ, ತಮ್ಮ ಹಲವಾರು ಪ್ರಸಿದ್ಧ ೀವಾಲಯಗಳು, ರಥಗಳು ಲೈಂಗಿಕ ಶಿಲ್ಪಗಳಿಂದ ತುಂಬಿ ಹೋಗಿವೆ. ಇನ್ನು ವರಸಗಳಲ್ಲಿ ಶೃಂಗಾರವೂ ಒಂದಾಗಿರುವುದರಿಂದ ನಮ್ಮ ಪ್ರಾಚೀನ ಸಾಹಿತ್ಯವು ಂಗಾರ ವರ್ಣನೆಗಳಿಂದ ತುಂಬಿ ತುಳುಕುತ್ತಿದೆ. ಜೀವನದ ನಾಲ್ಕು ಪುರುಷಾರ್ಥಗಳಲ್ಲಿ ರ್ಮ, ಅರ್ಥ, ಮೋಕ್ಷಗಳ ಜೊತೆಗೆ ಕಾಮಕ್ಕೂ ಸ್ಥಾನ ಸಿಕ್ಕಿದೆ. ಅಂದ ಮೇಲೆ ನಮ್ಮ ಮಾಜ ಕಾಮ ಅಥವಾ ಲೈಂಗಿಕತೆಯ ಬಗ್ಗೆ ತಿರಸ್ಕಾರ, ಮಡಿವಂತಿಕೆ ಹೊಂದಿರಲಿಲ್ಲ ಂಬ ಭಾವನೆ ಬರುತ್ತದೆ.

ಆದರೆ, ಇದಕ್ಕೆ ತದ್ವಿರುದ್ಧವಾಗಿ ಸಾಮಾನ್ಯ ಜನ ಜೀವನದಲ್ಲಿ ಲೈಂಗಿಕತೆ ಂದು ಪಾಪ ಎನ್ನುವಂಥ ತಪ್ಪು ಭಾವನೆ, ಮಡಿವಂತಿಕೆ ಕಾಣುತ್ತದೆ. ಲೈಂಗಿಕತೆಯ ಗ್ಗೆ ರಹಸ್ಯ ಭಾವ, ಅವಹೇಳನ ಹೆಚ್ಚಾಗಿ ಕಂಡುಬಂದು ಅದರಬಗ್ಗೆ ಬಹಿರಂಗವಾಗಿ ಮಾತನಾಡುವುದು ಅಸಹ್ಯ ಎಂಬ ಕಲ್ಪನೆ ಬೆಳೆದು ಬಂದಿದೆ. ಹೀಗಾಗಿ ಲೈಂಗಿಕತೆಯ ಗ್ಗೆ ಆರೋಗ್ಯ ಚಿಂತನೆಗಿಂತ ಅನಾರೋಗ್ಯಕರ ಚಿಂತನೆಯೇ ತುಂಬಿಕೊಂಡಿದೆ. ಬಾಲ್ಯ ವಿವಾಹ ನಡೆಸಿ, ಹದಿಹರೆಯದಲ್ಲೇ ಲೈಂಗಿಕ ಚಟುವಟಿಕೆ ಉತ್ತೇಜಿಸುತ್ತಿದ್ದ ಸಮಾಜದಲ್ಲಿ ಯುವಜನ ಅದರ ಬಗ್ಗೆ ಮಾತನಾಡುವುದು ತಪ್ಪು ಎಂಬ ಅಭಿಪ್ರಾಯ ಬೆಳೆದಿದೆ.

ಆಧುನಿಕ ನಾಗರೀಕ ಸಮಾಜದಲ್ಲಿ ಈ ವಿಪರ್ಯಾಸ ಬೇರೆ ಬೇರೆ ರೀತಿಯಲ್ಲಿ ಕವಲೊಡೆದಿರುವುದು ಕಾಣುತ್ತದೆ. ಇಂದು ಲೈಂಗಿಕತೆಯ ಬಗ್ಗೆ ರಹಸ್ಯ ಸ್ವಭಾವ ಗತ್ಯವೂ ಹೌದು ಎಂಬುದು ಮುಂದುವರಿದಿದೆಯಾದರೂ ಅರಿವಿನ ಸ್ಫೋಟದಿಂದ ಲೈಂಗಿಕ ಪರಿಜ್ಞಾನವು ವ್ಯಾಪಕವಾಗಿ ಲಭ್ಯವಿದೆ. ಆದರೆ, ಇವರಲ್ಲಿ ಅನಾರೋಗ್ಯಕರ ಪ್ರಚಾರವೇ ಹೆಚ್ಚು ಎಂಬುದು ಖೇದದ ಸಂಗತಿ. ಇಂದು ಲೈಂಗಿಕ ಪರಿಜ್ಞಾನ ಯಾರ ಕೈಗಾದರೂ ಎಟುಕುತ್ತದೆ. ಆದರೆ, ಯಾವ ರೀತಿಯಲ್ಲಿ ಎಂಬುದೇ ಮುಖ್ಯ ಪ್ರಶ್ನೆ.

ಇಂದಿನ ಯುವಜನರು ಹಿಂದಿನಂತೆ ಶಿಲ್ಪ, ಸಾಹಿತ್ಯಗಳ ಮೂಲಕ ಪರೋಕ್ಷ ಲೈಂಗಿಕ ಅರಿವು ಪಡೆಯಬೇಕಾಗಿಲ್ಲ. ಅದು ನೇರವಾಗಿ ವೈಜ್ಞಾನಿಕ ರೂಪದ ಲಭ್ಯವಿದೆ. ಆದರೆ, ಲೈಂಗಿಕ ಪರಿಜ್ಞಾನ ಮತ್ತು ಯುವಜನರ ನಡುವೆ ಸರಿಯ ಸಂಪರ್ಕ ಸೇತುವೆ ನಿರ್ಮಾಣವಾಗಿಲ್ಲ. ಹೀಗಾಗಿ ಯುವಜನರು "ಅಡ್ಡದಾರಿ" ಲೈಂಗಿಕ ಪರಿಜ್ಞಾನ ಪಡೆದುಕೊಳ್ಳುವುದೇ ಹೆಚ್ಚಾಗುತ್ತಿದೆ.

ಅಶ್ಲೀಲ ಸಾಹಿತ್ಯ, ಚಲನಚಿತ್ರಗಳು, ಆಂಗ್ಲದ ಪತ್ರಿಕೆಗಳು ಮುಂತಾದವು ಮೂಲಕ ಲೈಂಗಿಕ ವಿಜ್ಞಾನ, ವಿಕೃತ ರೀತಿಯಲ್ಲಿ ಪ್ರಸಾರವಾಗುತ್ತಿದೆ. ವೈಜ್ಞಾ ವಿಧಾನಗಳ ಕೊರತೆಯಿರುವುದರಿಂದ ಯುವಜನರು ಇವುಗಳತ್ತ ಆಕರ್ಷಿತರಾ ಆಶ್ಚರ್ಯವಲ್ಲ. ಆದರೆ ಇವು ತಿಳುವಳಿಕೆ ನೀಡುವುದಕ್ಕಿಂತ ಹೆಚ್ಚಾಗಿ ಪ್ರಚೋದ ವಿಕೃತತೆಯನ್ನು ಪೋಷಿಸುತ್ತದೆ. ನಮ್ಮ ಸಮಾಜದಲ್ಲಿ ಹೆಚ್ಚುತ್ತಿರುವ ಅತ್ಯಾಚ ಪ್ರಕರಣಗಳು ಇದರ ಪರಿಣಾಮವೆಂದೇ ಹೇಳಬೇಕು. ಇವು ಲೈಂಗಿಕ ಅಜ್ಞಾನವನ್ನ ದೂರ ಮಾಡುವುದಿಲ್ಲ. ಲೈಂಗಿಕತೆಯ ಬಗ್ಗೆ ಪ್ರಚಾರ ಹೆಚ್ಚಿದರೂ ಅದು ಅಶ್ಲೀ ಕಡೆಗೇ ವಾಲುತ್ತದೆ ಎಂಬುದು ಇಲ್ಲಿ ಗಮನಾರ್ಹ.

ಆದರೆ, ಮುಖ್ಯವಾಗಿ ಆಗಬೇಕಾಗಿರುವ ಕೆಲಸವೆಂದರೆ, ಲೈಂಗಿಕ ಪರಿಜ್ಞಾ ಶಿಕ್ಷಣ ರೂಪದಲ್ಲಿ ದೊರೆಯುವ ವ್ಯವಸ್ಥೆ ನಿರ್ಮಾಣವಾಗಬೇಕು. ಅಶ್ಲೀಲತೆ ಸೋಂಕಿಲ್ಲದೆ, ಲೈಂಗಿಕ ಜ್ಞಾನವನ್ನು, ವೈಜ್ಞಾನಿಕ ವಿವರಣೆಯಾಗಿ ತಿಳಿಸಬೇ ಪದವೀಧರರಲ್ಲೂ ಲೈಂಗಿಕ ಅಜ್ಞಾನ ತುಂಬಿ ತುಳುಕುತ್ತಿರುವುದನ್ನು ನಾವು ಕಾಣು ಇದು ಬದಲಾಗಿ, ಲೈಂಗಿಕತೆ, ಸಂಭೋಗ, ಗರ್ಭ ಕಟ್ಟುವ ಕ್ರಿಯೆ, ಕುಟು ಯೋಜನೆ ಇವೆಲ್ಲದರ ಬಗ್ಗೆ ಆರೋಗ್ಯಕರ ನಿಲುವು ಮೂಡಬೇಕಾದರೆ ಲೈಂಗಿಕ ಶಿಕ್ಷ ಅನಿವಾರ್ಯ. ಹದಿ ಹರೆಯದಲ್ಲೇ ಶಾಲಾ ಕಾಲೇಜುಗಳಲ್ಲಿ ಅಗತ್ಯಕ್ಕೆ ತಕ್ಕ ಲೈಂಗಿಕ ತಿಳುವಳಿಕೆ ನೀಡುವುದು ತೀರಾ ಅಗತ್ಯವಾಗಿದೆ. ಯೌವನದಲ್ಲಿ ಆರೋಗ್ಯ ಲೈಂಗಿಕ ಜೀವನ ಸಾಗಿಸಬೇಕಾದರೆ ಬಾಲ್ಯದಿಂದ ಅದರ ಬಗ್ಗೆ ಮಾನಸಿಕ, ಬೌದ್ಧ ಸಿದ್ಧತೆಯನ್ನು ವೈಜ್ಞಾನಿಕವಾಗಿ ಮಾಡಬೇಕು. ಜೀವನದ ಮುಖ್ಯ ಚಟುವಟಿಕೆಗ ಒಂದಾದ ಲೈಂಗಿಕತೆಯ ಬಗ್ಗೆ ಅಸಹ್ಯಪಟ್ಟುಕೊಳ್ಳುವುದಕ್ಕಿಂತ ಅರಿವು ಮೂಡಿಸುವ ವ್ಯಕ್ತಿಯ ಮತ್ತು ಸಮಾಜದ ಹಿತ ದೃಷ್ಟಿಯಿಂದ ಅಗತ್ಯವಾಗಿದೆ.

ಡಾ : ಅಂಬೇಡ್ಕರ್ ಜನ್ಮಶತಾಬ್ಧಿ ಸಂದರ್ಭದಲ್ಲಿ ಯುವಜನರಿಗೆ ಶುಭಾಶಯಗ

# ಒಂದು ಘಟನೆ ಹಲವು ಯೋಚನೆ

—ಅನಂತ ಕಲ್ಲೋಳ, ೫೦೬, ಕುಲಕರ್ಣಿ ಬೀದಿ, ಬೆಳಗಾಂವಿ-೫೯೦೦೦೨.

ಗೋಧೂಳಿಯ ಸಮಯ. ಗಾಳಿಸೇವನೆಗೆಂದು ಎಂದಿನಂತೆ ನಮ್ಮೂರ ಬದಿ
ಲಕ್ಷ್ಮೀದಿಬ್ಬದ ಕಡೆಗೆ ಸಾಗಿದ್ದೆ. ಅಲ್ಲಿಯೇ ಪಕ್ಕದಲ್ಲಿ ಗೋಮಾಳವಿದೆ. ಗೋಮಾ
ಮೇಯಲು ಹೋದ ದನಕರುಗಳು ಮರಳಿಬರುತ್ತಿದ್ದವು. ರಸ್ತೆಯ ಅಂಚಿ
ಎಂಟು ವರ್ಷದ ಹುಡುಗಿಯೊಬ್ಬಳು ತೀವ್ರ ನಿರೀಕ್ಷೆಯಲ್ಲಿ ಕಾದುಕೊ
ನಿಂತಿದ್ದಳು. ಮಾಸಿದ ಹರಕು ಲಂಗ ಮತ್ತು ಸ್ಥಿತಿಗತಿಯು ಕುಪ್ಪಸ ತೊಟ್ಟ ಬಾ
ಮುಖದಲ್ಲಿ ದಾರಿದ್ರ್ಯ ಮತ್ತು ಹಿಂದಿನ ಹಸಿವಿನ ದಟ್ಟ ಛಾಯು!

ಕ್ಷಣದಲ್ಲಿ ಆ ಹಸಿದ ಮೊಗದಲ್ಲಿಯ ಕಣ್ಣುಗಳು ಮಿಂಚಿದುದು ಗೋ
ವಾಯಿತು. ಅವಳ ಮುಖದಲ್ಲಿ ಎಂಥದೋ ಒಂದು ಸಂತೃಪ್ತ ಭಾವನೆ ತೇಲಿ
ಕಂಡಿತು. ಅವಳ ಗೆಲುವಿಗೆ ಕಾರಣವೇನಿರಬಹುದೆಂದು ಕುತೂಹಲದಿಂದ ನಿರುಕಿ
ಗೋಮಾಳದಲ್ಲಿ ಮೇಯ್ದು ಮರಳುತ್ತಿದ್ದ ಒಂದೆರಡು ಹಸುಗಳು ಸಗಣಿ ಹಾಕಿದ್ದ
ದನಗಳು ದಾಟಿ ಹೋದ ಬಳಿಕ ಆ ಹುಡುಗಿ ಓಡೋಡುತ್ತ ಹೋಗಿ ಎರಡು ಕೈ
ಸಗಣಿ ಎತ್ತಿಕೊಂಡಳು. ಅವಳು ಆ ಸಗಣಿ ಮಾಡಿ ಅಥವಾ ಅದರಿಂದ ಬೆರಣಿ
ಕಾಸು ಸಂಪಾದಿಸುತ್ತಿರಬಹುದು. ಇದೇ ಅವಳ ಹೊಟ್ಟೆ ಹೊರೆಯುವ ಉದ್ಯೋ
ವಾಗಿಳಬಹುದು.

ಅಷ್ಟರಲ್ಲಿ ಅಲ್ಲೊಂದು ಸೈನಿಕರ ಹಸಿರು ಬಂಡಿ ಬಂದು ನಿಂತಿತ್ತು. ರಸ್ತೆ
ಬದಿಗೆ ಒಂದು ಚಿಕ್ಕ ಕಾಲುವೆ ಹರಿಯುತ್ತದೆ. ಬಂಡಿಯ ಚಾಲಕ ತನ್ನ ವಾಹನಕ
ನೀರು ಪಡೆಯಲೆಂದು ಬಂಡಿ ನಿಲ್ಲಿಸಿ, ಖಾಲೀ ಡಬ್ಬದೊಡನೆ ಕೆಳಗಿಳಿಯುತ್ತಾ
ಆತನ ದೃಷ್ಟಿ ಆ ಹುಡುಗಿಯ ಮೇಲೆ ಬಿದ್ದಾಗ ಆತನಲ್ಲಿ ಮರುಕ ಹುಟ್ಟಿದಂತಿತ
ಆತ ಮರಳಿ ತನ್ನ ವಾಹನ ದೆಡೆಗೆ ಬಂದು ಒಳಗೆ ಕೈತೊರಿ ಬ್ರೆಡ್ಡಿನ ನಾಲ್ಕು ತುಂ
ಎತ್ತಿಕೊಂಡು ಅವಳೆಡೆಗೆ ನೀಡುತ್ತ,

'ಮಗೂ' ಈ ಬ್ರೆಡ್ ತೆಗೆದುಕೊಳ್ಳಮ್ಮ' ಎಂದು ಅನ್ನುತ್ತಾನೆ.

ಬ್ರೆಡ್ ಕಂಡು ಅವಳಿಗೆ ಎಲ್ಲಿಲ್ಲದ ಖುಷಿಯಾಯ್ತು. ಅವಳು ಆತುರಾತುರ
ಓಡಿ ಬಂದಳು. ಆದರೆ ಅವಳು ಅದನ್ನು ಸ್ವೀಕರಿಸುವಂತಿರಲಿಲ್ಲ, ಏಕೆಂದರೆ ಅವ
ಸಗಣಿ ಹಿಡಿದಿದ್ದರಿಂದ ಎರಡೂ ಕೈಗಳು ಗಲೀಜಾಗಿದ್ದವು.

'ಅಣ್ಣಾ' ಇಲ್ಲಿಯೇ ಕಟ್ಟೆಯ ಮೇಲೆ ಇಡಣ್ಣ ನಾನು ಕೈ ತೊಳೆದುಕೊಂ
ಬಂದು ಎತ್ತಿಕೊಳ್ಳುವೆ, ಎಂದಳು.

ವಾಹನದ ಚಾಲಕ ಆ ಬ್ರೆಡ್ಡಿನ ತುಂಡುಗಳನ್ನು ರಸ್ತೆಯ ಬದಿಗಿದ್ದ ಸೇತುವೆಯ ಕಟ್ಟೆಯ ಮೇಲಿಟ್ಟು ನಂತರ ಕಾಲುವೆಯಿಂದ ಡಬ್ಬದಲ್ಲಿ ನೀರು ತುಂಬಿಕೊಂಡು ಬಂದು ವಾಹನವನ್ನೇರಿ ಮುಂದೆ ಪಯಣಿಸಿದ. ಇತ್ತ ಆ ಹುಡುಗಿ ಕಾಲುವೆಗೆ ಇಳಿದು ಕೈಕಾಲು ತೊಳೆದುಕೊಂಡು ಒಳ್ಳೇ ಆಸೆಯಿಂದ ಸೇತುವೆಯ ಕಟ್ಟೆಗೆ ಬರುವಷ್ಟರಲ್ಲಿ ಒಂದು ಕಾಂಡಿಗ ನಾಯಿ ಆ ಬ್ರೆಡ್ಡಿನ ತುಂಡುಗಳನ್ನು ಕಚ್ಚಿಕೊಂಡು ಓಡಿತು. ಚಣದ ಹಿಂದೆ ಹರ್ಷೋಲ್ಲಾಸದಿಂದ ಮಿನುಗುತ್ತಿದ್ದ ಅವಳ ಕಣ್ಣುಗಳಲ್ಲಿ ಹನಿಯೊಡೆಯುವುದೊಂದೇ ಬಾಕಿ!

ಅವಳ ಕೈ ಕೊಳೆಯಾಗದಿದ್ದಲ್ಲಿ ಇಂಥ ಪ್ರಸಂಗವೇ ಬರುತ್ತಿರಲಿಲ್ಲ. ಚಾಲಕ ಬ್ರೆಡ್ ನೀಡಿದಾಗ ಸಗಣಿಯ ಕೈಯಿಂದ ಅದನ್ನು ಸ್ವೀಕರಿಸುವುದು ಸಾಧ್ಯವಿರಲಿಲ್ಲ. ಬಂದೇ ಕೈತನಕ ಬಂದ ತುತ್ತು ಅವಳ ಬಾಯಿ ಸೇರುವ ಮೊದಲು ನಾಯಿಯ ಪಾಲಾಯಿತು. ಮೂಕ ಸಾಕ್ಷಿಯಂತೆ ನಿಂತಿದ್ದ ನಾನು ಮೂಕವಿಸ್ಮಿತನಾದೆ. ಮನದಲ್ಲಿ ನಾನಾ ಬಗೆಯ ವಿಚಾರ ತರಂಗಗಳೆದ್ದವು. ಭಾಗ್ಯ ಬಂದಾಗ ಅದನ್ನು ಬರಮಾಡಿಕೊಳ್ಳಲು ನಮ್ಮ ಕೈ, ಮನ, ಬುದ್ಧಿ, ಹೃದಯ ಶುದ್ಧಿಯಾಗಿದ್ದರೆ ಮಾತ್ರ ಅದು ನಮಗೆ ದಕ್ಕುವುದು ಸಾಧ್ಯ. ನಮಗೆ ದಕ್ಕುವುದೋ ಇಲ್ಲವೋ ಎಂಬ ಹಪಹಪತನದಲ್ಲಿ ಸಿಕ್ಕಿದ್ದನ್ನು ಬಾಚಿಕೊಳ್ಳುವ ಮನೋಧರ್ಮ ಬೆಳೆಸಿಕೊಂಡರೆ ಸೌಭಾಗ್ಯ ಒದಗಿದರೂ ಸ್ವೀಕರಿಸಲಾರದ ಸ್ಥಿತಿಯಿಂದಾಗಿ ಅದಕ್ಕೆ ಎರವಾಗಬೇಕಾಗುತ್ತದೆ. ಕೊಡುವವನು ಕೊಟ್ಟ. ಪಡೆಯಬೇಕಾದವನು ಶುದ್ಧನಾಗಿರಲಿಲ್ಲ, ಆದ್ದರಿಂದ ಸ್ವೀಕರಿಸಲು ಅಸಮರ್ಥನಾದ. ಮೂರನೆಯವನು ಅದನ್ನು ಎಗರಿಸಿಕೊಂಡು ಓಡಿಹೋದ ಇಂಬಂಥ ಸಂದರ್ಭಗಳನ್ನು ಆಗಾಗ ಕಾಣುತ್ತೇವೆ. ಈ ಯೋಚನೆಯ ಅಲೆಯಲ್ಲಿ ನಾನು ಆ ಹುಡುಗಿಯ ಕಡೆಗೆ ನೋಟ ಹರಿಸಿದೆ. ಅವಳು ತನಗೆ ಏನೊಂದೂ ನಷ್ಟವಾಗಿಲ್ಲ ಎಂಬ ಭಾವನೆಯನ್ನು ಮೊಗದಲ್ಲಿ ಬೆಳಗುತ್ತ ಮತ್ತೆ ಸಗಣಿ ಎತ್ತಲು ಮುನ್ನಡೆದಳು.

ನನ್ನ ತಲೆಯಲ್ಲಿಯ ಯೋಚನೆಯ ಅಲೆ ಮತ್ತೆ ಲಾಗ ಹೊಡೆಯಿತು. ಅರೇ ಅವಳಿಗೆ ಬ್ರೆಡ್ ಕಳೆದುಕೊಂಡ ಬಗ್ಗೆ ಅಂಥ ದುಃಖವೇನಿಲ್ಲವಲ್ಲ. ಭಿಕ್ಷೆಯಾಗಿ ನೀಡಲಾದ ಆ ಬ್ರೆಡ್ ತನಗೆ ದಕ್ಕಲಿಲ್ಲ ಎನ್ನುವುದಕ್ಕಿಂತ ಅದು ತನಗೆ ತಕ್ಕುದಲ್ಲ, ಎಂಬಂತೆ ಅವಳ ಮುಖಭಾವ ಸೂಚಿಸುತ್ತಿತ್ತು. ಭಿಕ್ಷೆಯ ಬ್ರೆಡ್‌ಗಿಂಥ ತನ್ನ ಬೆರಣಿ ತಟ್ಟಿ ಮಾರುವ ಮತ್ತು ಅದರಿಂದ ಹೊಟ್ಟೆ ಹೊರೆಯುವ ಉದ್ಯೋಗವೇ ವಾಸಿ ಎಂಬ ಯೋಚನೆ ಅವಳ ಮೊಗದಲ್ಲಿ ಮಡುಗಟ್ಟಿದಂತಿತ್ತು. ನಾನು ಮುನ್ನಡೆದೆ

## ರಸಿಕ ಸಿದ್ಧನಿಗೆ

ಚಂದ್ರಕಲಾ ನಂದಾವರ, ದೃಶ್ಯ 5–190, ಕಾಟಿವಳ್ಳಿ-574149. ಮಂಗಳೂರು ತಾ॥ ದ.

ಕಾಯದ ನಗ್ನತೆ ಮುಚ್ಚುವ
ಅಂದದ ಅಲಂಕಾರ ಸಿಂಗಾರ
ಮನವ ಬತ್ತಲೆಗೊಳಿಸಿ
ಯೋಗಿಯಾಗಿಸುವ ಪರಿ,
ಮನದ ಕತ್ತಲೆ ಕಳೆದು
ಬತ್ತಲೆಯಾದ ದೇಹಕೆ
ಅನುರಾಗದ ಬಟ್ಟೆ ಹೊದಿಸಿ
ಭೋಗಿಯಾಗಿಸುವ ಪರಿ,
ಒಳಗು ಹೊರಗುಗಳ
ಕತ್ತಲೆಯಳಿಸಿ ಬತ್ತಲಾಗಿಸಿ
ಬಯಲಲ್ಲಿ ಭರತಕುಲವನ್ನು
ಅಚಲವಾಗಿ ಕಡೆದಿರಿಸಿದ
ಬಾ, ರಸಿಕ ಸಿದ್ಧ ರತ್ನಾಕರನೇ
ನಿನಗೆ ನನ್ನ ನಮನ

## ಅರಿವು

ಹುಟ್ಟು ಸಾವುಗಳ ಗುಟ್ಟನರಿವ
ಅರಿವಿಗೂ ಮಿಗಿಲು
ಹುಟ್ಟುಸಾವುಗಳಾಚೆಯ
ಚಿರಂಜೀವದಲಿ ನೆಲೆಯು
ಬದುಕ ಚೌಕಟ್ಟಿನ ಕಟ್ಟುಪಾಡುಗಳ
ಕಟ್ಟುವ ಕುಸುರಿ ಕಾಯಕಕ್ಕೂ ಮಿಗಿಲು
ಚೌಕಟ್ಟನ್ನೊಡೆದು ಬಂಡೆಯಲಿ
ಬದುಕಿನೊರತೆಯ ಚಿಮ್ಮಿಸುವ ಪರಿಯು
ನಿಜದ ನೆಲೆಯ ಅರಿವು
ಬದುಕು ತಳೆದ ನಿಲುವು.

ಸ್ಥಾಪನೆ: 1943 ತಂತಿ: 'ವೀರಶೈವ'

ಕೆ.ಎಸ್.ಟಿ. 73606285 }
ಸಿ.ಎಸ್.ಟಿ. 73656288 } ದಿ 24-8-62 ಕೇಂದ್ರ ಕಛೇರಿ: { 72866 / 70204 }

# ವೀರಶೈವ ಸಹಕಾರಿ ಸಂಘ, ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ: ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತು ಚಿಲ್ಲರೆ ಮಾರಾಟ ಶಾಖೆಗಳ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1991-92 ನೇ ಸಾಲಿನಲ್ಲಿ ಷೇರು ಬಂಡವಾಳ: ಸದಸ್ಯರಿಂದ ರೂ. 4.70 ಲಕ್ಷ
ಸರ್ಕಾರದಿಂದ ರೂ. 13.42 ಲಕ್ಷ
ಒಟ್ಟು ರೂ. 18.12 ಲಕ್ಷ

1) ಸದಸ್ಯರ ಸಂಖ್ಯೆ 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1540.40 ಲಕ್ಷ
3) ಆಪದ್ಧನ : ರೂ. 11.92 ಲಕ್ಷ
4) ಇತರೆ ನಿಧಿಗಳು : ರೂ. 32.00 ಲಕ್ಷ
5) 1991-92 ರಲ್ಲಿ ನಿವ್ವಳ ಲಾಭ : ರೂ. 04.05 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ರಿಯಾಯಿತಿ

ನಮ್ಮ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು:
ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು
–: ನಿರ್ದೇಶಕರು :–
ಶ್ರೀ ಬಿ. ಎಸ್. ಪರಮಶಿವಯ್ಯನವರು
ಶ್ರೀ ವೈ. ಟಿ. ಮಹದೇವಪ್ಪನವರು
ಶ್ರೀ ಬಿ. ಟಿ. ಉಮೇಶ್‌ರವರು
ಶ್ರೀ ಬಿ. ಬಸವರಾಜುರವರು
ಶ್ರೀ ಎಂ. ಶಿವಪ್ಪನವರು
ಶ್ರೀ ಡಿ. ಚಂದ್ರಶೇಖರಯ್ಯನವರು
ಶ್ರೀ ಆರ್. ನೀಲಕಂಠಯ್ಯನವರು
ಶ್ರೀ ಜಿ. ಶಿವಕುಮಾರ್‌ರವರು

11) ಶ್ರೀಮತಿ ಎಸ್.ಎಸ್. ಗಿರಿಜರವರು
12) ಶ್ರೀಮತಿಪ್ರೇಮಸೋಮಸುಂದರ್‌ರವರು
ಸರ್ಕಾರದ ಪ್ರತಿನಿಧಿ, ನಿರ್ದೇಶಕರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ಉಪನಿಬಂಧಕರು ಸಹಕಾರ ಸಂಘಗಳ
ಉಪನಿಬಂಧಕರ ಕಚೇರಿ
ಬೆಂಗಳೂರು ನಗರ ಜಿಲ್ಲೆ
17) ಶ್ರೀ ಎನ್. ಡಿ. ಹನುಮಂತರಾಯಪ್ಪ
ಬಿ. ಡಿ ಸಿ. ಸಿ. ಬ್ಯಾಂಕ್
ನಿರ್ದೇಶಕರು.
18) ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು.

# ಗುರುಕರುಣವೇ ಸಜ್ಜನರ ಸಂಜೀವಿನಿ

—ಶ್ರೀಮತಿ ನಾಗರತ್ನಮ್ಮ, ನಂ-789, 4ನೇ ಬ್ಲಾಕ್, 3 ನೇಮೈನ್, ರಾಜಾಜಿನಗರ,

"ಧರ್ಮಸಾರಮಿದಂ ಜಗತ್" ಎಂಬ ದಿವ್ಯವಾಣಿಯನ್ನು ಪುರ ಕಾಲದಿಂದಲೂ ಅನೇಕ ಸಾಧುಸಂತರುಗಳು ಋಷಿಪುಂಗವಾದಿ ಪುಣ್ಯಪುರುಷರ ಬಾರಿಬಾರಿಗೂ ಉಪದೇಶಮಾಡುತ್ತಲೇ ಬಂದಿರುತ್ತಾರೆ.

ಆ ಮಹಾತ್ಮರುಗಳ ಸದುಪದೇಶದ ಪ್ರಭಾವ ಕೆಲವುವೇಳೆಗಳು ವ ಮಾನವನ ಮೇಲೆ ಪರಿಣಾಮವಾಗಿ ಮತ್ತೆಮರೆಯಾಗಲು ಕಾರಣವೆಂದರೆ ಮಾ ಜಾಲದ ತೀಕ್ಷ್ಣಪರಿಣಾಮವೇ ಎಂದು ತಿಳಿಯಬಹುದು.

ಇಂದು ಮಾನವನು ಧರ್ಮವಿಮುಖನಾಗಿ ಅಸುರಿಪ್ರಭಾವಕ್ಕೆ ಒಳಗಾಗಿದ ಪರಕೀಯ ಸಂಸ್ಕೃತಿಗೆ ಶರಣುಹೋಗಿ ಪಾವನವಾದ ನಮ್ಮ ಭಾರತೀಯ ಸಂಸ್ಕ ಯನ್ನು ತಿರಸ್ಕಾರಮಾಡಿ ಅಜ್ಞಾನದ ಕತ್ತಲಲ್ಲಿ ಗೊತ್ತುಗುರಿ ಕಾಣದೆ ಮುಗ್ಗರಿಸುತ್ತಲೇ ಮುಂದೆ ಮುಂದೆ ಹೋಗಲು ಪ್ರಯತ್ನಿಸುತ್ತಿದ್ದಾರೆ. ಹೀ ಇತ್ತಲೂಇಲ್ಲ ಅತ್ತಲೂಇಲ್ಲ ತ್ರಿಶಂಕುಸ್ವರ್ಗ ಪ್ರಾಪ್ತಮಾಡಿಕೊಳ್ಳುವಂತಾ ಇಂದಿನ ಈ ಭಾರತೀಯನ ಪರಿಸ್ಥಿತಿ ಪರಿವರ್ತಿಸಬೇಕಾದರೆ ಇಂತಹ ದುರ್ಧರವ ದುರ್ಮುಹೂರ್ತದಲ್ಲಿ, ಖ್ಯಾತರಾದ ಹಾಗೂ ಧರ್ಮಸ್ವರೂಪಿಗಳಾದ ಗುರುಗಳ ಕ ಯೋಚನೆಯನ್ನು ನಾವು ಬೇಡಲೇಬೇಕು.

ಜಗತ್ಕಲ್ಯಾಣಕ್ಕಾಗಿಯೇ ಮೀಸಲಾಗಿರುವ ಸದ್ಗುರುಗಳನ್ನು ಶರಣುಹೋ ಅವರಿಂದ ಭಕ್ತಿ ಜ್ಞಾನ ಕರ್ಮ ಹಾಗೂ ಅನೇಕಲೌಕಿಕ, ಆಧ್ಯಾತ್ಮಿಕ, ಪಾರ ಗಳ ಸುಜ್ಞಾನಸಂಪತ್ತು ದೊರೆತು ಧರ್ಮಕ್ರಾಂತಿಯುಂಟಾಗಿ ಪ್ರತಿಯೊ ಭಾರತೀಯನೂ ನಿಜವಾದ ಶಾಂತಿಸುಖಗಳನ್ನು ಪಡೆಯುತ್ತಾನೆ. ಜೀವನ ಸಾರ್ಥಕವಾಗುತ್ತದೆ. ಪರಾತ್ಮರವಸ್ತು ಭಾವದೃಷ್ಟಿಗೆ ಸುಗುಣವಾಗಿ ತೋರಿದ ಜ್ಞಾನದೃಷ್ಟಿಯಲ್ಲಿ ಅದು ನಿರ್ಗುಣವಾಗಿರುವುದು. ನಾವು ನಮ್ಮ ಜ್ಞಾನೇಂದ್ರಿಯ ಮೂಲಕ ಪರಮಾತ್ಮ ಸೃಷ್ಟಿಯನ್ನು ಸದಾ ಅನುಭವಿಸುತ್ತಲೇ ಇರುವುವು. ಆದ ನಮ್ಮ ವ್ಯಗ್ರತೆಯ ಮೂಲಕ ಸರ್ವಸಾಕ್ಷಿ ಸತ್ಯದ ಎಚ್ಚರ ನಮಗರಿವಾಗುವುದಿ ಶ್ರೇಷ್ಠಶರಣರಲ್ಲಿ ಪರಮಾತ್ಮನು ನೆಲಸಿರುವುದರಿಂದ ಅವನ ಪ್ರೇರಣಾನುಸ ಸದ್ಗುರುಗಳಿಂದ ನಮಗೆ ಸದ್ಬೋಧನೆ ದೊರಕುತ್ತದೆ.

ಕಾಮದಿಂದ ಕರ್ಮ, ಕರ್ಮದಿಂದ ಜನ್ಮ, ಜನ್ಮದಿಂದ ಜರಾಮರಣಾದಿದು ಒಂದಕ್ಕೊಂದು ಹೆಣೆದಂತೆ ಮಾನವನನ್ನು ಹಿಂಬಾಲಿಸಿ ಬರುತ್ತವೆ.

ಈ ವಿಷಚಕ್ರದಿಂದ ನಾವು ತಪ್ಪಿಸಿಕೊಳ್ಳಬೇಕಾದರೆ ಮೊದಲು ಕಾ

ನಿಗ್ರಹಶಕ್ತಿಯನ್ನು ವೈಗೂಡಿಸಿಕೊಳ್ಳಬೇಕು. ಮೂಲಶತೃವಿನ ಉಚ್ಚಾಟನೆ ಆಯಿತೇದರೆ ಮುಕ್ತಿಪಥವನ್ನು ಕಾಣಬಹುದು.

ಜ್ಞಾನಿಯಾದವನಿಗೆ ಕರ್ಮಬೀಜವು ನಾಶವಾಗಿ ಪುನರ್ಜನ್ಮ ಇಲ್ಲದಂತಾಗುವುದು. ಇದಕ್ಕೆ ವಿದೇಹಮುಕ್ತಿಯೆನ್ನುತ್ತಾರೆ. ದೇಹವಿರುವಾಗಲೇ ಅಪರೋಕ್ಷಜ್ಞಾನಪ್ರಾಪ್ತಿ ವಾದರೆ ಅದಕ್ಕೆ ಜೀವನ್ಮುಕ್ತಿ ಎನ್ನುತ್ತಾರೆ.

ಸತ್ಕರ್ಮಾನ್ನಾಚರಣೆಯಿಂದ ಲಭಿಸಿದ ಪುಣ್ಯ ಅಶಾಶ್ವತ. ಜ್ಞಾನದೃಷ್ಟಿಯಿಂದ ಲಭಿಸಿದ ಪುಣ್ಯ ಶಾಶ್ವತವಾದದ್ದು ಅದೇ ಮುಕ್ತಿಸುಖ.

ಅಹಂಕಾರ, ಮಮಕಾರ, ಕಾಮ ಕ್ರೋಧ ಇಂದ್ರಿಯಸುಖಲೋಲುಪತೆ ಮುಂತಾದ ದೋಷಗಳು ಅಜ್ಞಾನದಿಂದಲೇ ಪ್ರಾಪ್ತವಾಗುತ್ತದೆ. ಜ್ಞಾನಸಾಧನೆಗೆ ಮುಖ್ಯವಾಗಿ ಆತ್ಮಚಿಂತನದ ಅರಿವಾಗಬೇಕು. "ದುರ್ಲಭಂ ಮಾನುಷಂಜನ್ಮ:" ಎನ್ನುವಂತೆ 84,00000 ಲಕ್ಷಯೋನಿಗಳಲ್ಲಿ ಸುದೀರ್ಘಸಂಚರಿಸಿ ವಿಕಾಸಹೊಂದಿದ ತರುವಾಯ ಸುಸಂಸ್ಕೃತ ಮಾನವಜನ್ಮ ದೊರಕುತ್ತದೆ. ಇಂತಹ ಅಮೂಲ್ಯಜನ್ಮದಲ್ಲೂ ಮಾನವನು ಕೇವಲ ಭೌತಿಕ ಸುಖವನ್ನೇ ತನ್ನ ಜೀವನದ ಗುರಿಯಾಗಿಟ್ಟುಕೊಂಡು ನಿಜವಾದ ಸುಖಶಾಂತಿಗಳನ್ನು ಕಳೆದುಕೊಂಡಿರುತ್ತಾನೆ.

ಭೌತಿಕ ಸುಖದಲ್ಲಿಯೇ ತನ್ನ ಶಾರೀರಿಕ ಹಾಗೂ ಭೌತಿಕ ಶಕ್ತಿಗಳನ್ನು ಅಪವ್ಯಯಗೊಳಿಸಿರುವ ಕಾರಣದಿಂದಲೇ ಜೀವನದಲ್ಲಿ ತತ್ವದೃಷ್ಟಿಯೇ ಇಲ್ಲದಂತಾಗಿದೆ ಭೂತಗೃಷ್ಟಿಯು ಅಧಿಕವಾಗಿ ಧಾರ್ಮಿಕ, ನೈತಿಕ, ತಾತ್ವಿಕ, ಸಾಂಸ್ಕೃತಿಕ, ಮತ್ತು ಆಧ್ಯಾತ್ಮಿಕ ಮೌಲ್ಯಗಳಿಗೆ ಬೆಲೆಯೇ ಇಲ್ಲದಂತಾಗಿದೆ.

ಆಧ್ಯಾತ್ಮಿಕಾನಂದಾನುಭವವನ್ನು ಪಡೆಯದ ಜನರು ತಾಮಸವೃತ್ತಿಯಿಂದ ರಾಕ್ಷಸಸ್ವರೂಪಿಗಳಂತಾದರೆ ಅವರ ವಾಸಾಂಗಣವೂ ನರಕಸದೃಶವಾಗುವುದೇನು ಹೆಚ್ಚಲ್ಲ. ಹೀಗೆ ಮನುಷ್ಯನು ದೇಹ ಸುಖವನ್ನೇ ನೆಚ್ಚಿ ಆತ್ಮಾನಂದವನ್ನೇ ಅರಿಯದಿರುವಾಗ ಈ ಅಜ್ಞಾನದ ಅಂಧತೆಯನ್ನು ಕಳೆಯಲಿಕ್ಕಾಗಿ ಅನೇಕ ಆದರ್ಶ ಮಹಿಮರು ಭೂಲೋಕದಲ್ಲಿ ಅವತರಿಸಿರುವರು. ಲೋಕಕ್ಕೆ ಅಡರಿರುವ ಆಸುರೀಗುಣಗಳನ್ನು ತೊಲಗಿಸಿ ಸುಜ್ಞಾನ ಜ್ಯೋತಿಯನ್ನು ಬೆಳಗಿಸಿ ಲೋಕದ ಸಮಸ್ತ ಜನಾಂಗಕ್ಕೂ ಹೊಂದಿಕೆ ಯಾಗುವಂತಹದೇ ಆದ ಮತ ಧರ್ಮಗಳನ್ನು ಸ್ಥಾಪಿಸಿ ಅವುಗಳ ಆಚರಣೆಯ ಮೂಲಕ ಸುಖಶಾಂತಿಗಳನ್ನು ಹೊಂದಿ ಆತ್ಮೋದ್ಧಾರ ಮಾಡಿಕೊಳ್ಳುವ ಅವಕಾಶವನ್ನು ಕಲ್ಪಿಸಿಕೊಟ್ಟಿರುವರು.

ಮಾನವನು ಮಾನವ ಧರ್ಮದಂತೆ ನಡೆದು ನಿಜವಾದ ಮನುಷ್ಯತ್ವವನ್ನು ಹೊಂದಿ ಇಹಪರಗಳಲ್ಲಿ ಸುಖಶಾಂತಿಗಳನ್ನು ಪಡೆಯಲೆಂಬ ಒಂದೇ ಧ್ಯೇಯದಿಂದಲೇ

ಹೂನ್.93

ಸಮಸ್ತ ಮತಧರ್ಮಗಳೂ ಸ್ಥಾಪಿತವಾಗಿವೆ. ಅನೇಕ ಜಾತಿಮತ ಪಂಥಗಳನ್ನೊಳ
ಗೊಂಡ ನಮ್ಮ ಹಿಂದೂ ಧರ್ಮವನ್ನು ವಿಶ್ವವಿಶಾಲ ಹರಹುಳ್ಳದ್ದಾಗಿ ಶಾಖೋಪ
ಶಾಖೆಗಳಿಂದ ಕೂಡಿದ ಮಹಾವಟವೃಕ್ಷಕ್ಕೆ ಹೋಲಿಸಿದ್ದಾರೆ ವಿನೋಬಾಜಿಯವರು
ಸಭ್ಯತೆ, ಸಂಸ್ಕೃತಿ, ಶ್ರೇಷ್ಠತೆಗಳೆಂಬ ದಿವ್ಯ ಸಂಪತ್ತುಗಳನ್ನು ಹೊಂದಿ ಆಧ್ಯಾತ್ಮ
ಸವಿತಿರಳನ್ನು ತಾವು ಅನುಭವಿಸಿ ಜಗತ್ತಿನ ಜನಾಂಗಕ್ಕೂ ಹಂಚತಕ್ಕ ಮಹಾತ್ಮರ
ನಮಗೆ ದೇವರೆಂಬ ಭಾವನೆಯಿಂದ ಪೂಜಿಸಬೇಕು.

ಅವರು ಯಾವ ಜಾತಿಮತ ಪಂಥದವರಾದರೇನು ? ಯಾವ ಪಕ್ಷ ಪಂಗಡದ
ರಾದರೇನು ? ಅವರು ಯಾವ ದೇಶದಲ್ಲಿದ್ದರೇನು ? ನಮ್ಮ ಆತ್ಮೋದ್ಧಾರಕ್ಕಾಗಿ ಅದ
ಆದೇಶವನ್ನು ಶ್ರದ್ಧೆಯಿಂದ ಪಾಲಿಸಲೇಬೇಕು.

ಪ್ರತಿಯೊಬ್ಬ ಮಾನವನ ಬುದ್ಧಿವಿಕಾಸ, ಮನೋವಿಕಾಸ, ಆತ್ಮವಿಕಾಸ
ಒಂದೇ ವಿಧವಾಗಿರದೆ ಬೇರೆ ಬೇರೆಯ ರೀತಿಯಲ್ಲಿರುತ್ತದೆ. ಇದನ್ನು ಈಗಿನ ಮನ
ಶಾಸ್ತ್ರಜ್ಞರೂ ಒಪ್ಪಲೇಬೇಕು. ಅವರವರಿಗೆ ಅವರವರ ಇಷ್ಟವಾದ ಮತ ಪಂ
ದೇವರುಗಳೇ ಇರಲಿ ಬೇಡವೆಂದವರಾರು ? ಸಹಸ್ರನಾಮನನ್ನು ಸಹಸ್ರವಿಧದಲ್ಲಿ ಪೂ
ದರೂ ಭಗವಂತನೊಬ್ಬನಿಗೇ ಅರ್ಪಣವಾಗುತ್ತದೆ. ಭಕ್ತರು ಯಾವ ದೇವತಾಮೂ
ರ್ತಿಯನ್ನು ಶ್ರದ್ಧೆಯಿಂದ ಪೂಜಿಸುವರೋ ಆ ಮೂರ್ತಿಯಲ್ಲೇ ನಾನು ಪ್ರಾದುರ್ಭ
ವಿಸಿ ಅವರ ಇಷ್ಟಾರ್ಥವನ್ನು ಈಡೇರಿಸುವೆನು" ಎಂದು ಗೀತಾವಾಣಿಯೇ ಹೇಳಿ
ವಾಗ ಇನ್ನು ಅನುಮಾನವೇನಿದೆ ?

ರುದ್ರಸೂಕ್ತವನ್ನು ರಚಿಸಿದ ಋಷಿಶ್ರೃಂಗವರೊಬ್ಬರು "ಸುವ್ಯವಸ್ಥಿತ ಸಮಾಜ
ಪೋಷಣೆಗಾಗಿ ಯಾರ್ಯಾರು ತಮ್ಮ ನಿಶ್ಕಾಮಕರ್ಮದ ಕುಸುಮಾರ್ಪಣೆ ಮಾಡ
ತ್ತಾರೋ ಆ ಮಹಾತ್ಮರೆಲ್ಲರೂ ಜಗತ್ತಿನಲ್ಲಿ ಅಭಿನಂದನಾರ್ಹರೇ ಎಂದು ಹೇಳ
ತ್ತಾರೆ. ಚರ್ಮ ಹದಮಾಡುವವನಿಗೆ, ರಥಾಕಾರನಿಗೆ; ಕುಂಬಾರನಿಗೆ ಎಲ್ಲರಿಗೂ
ನಮಸ್ಕಾರವನ್ನರ್ಪಿಸಿರುತ್ತಾರೆ, ಮಾನವತಾವಾದದ ಉತ್ತುಂಗ ಆದರ್ಶವನ್ನು
ನಾವು ಇಲ್ಲಿ ಅದೆಷ್ಟು ಸುಂದರವಾಗಿ ಕಾಣಬಹುದಲ್ಲವೆ ?

ಸದ್ಧರ್ಮವೇ ಸಮಸ್ಥ ಸಂಪತ್ತೆಂಬ ಧೈರ್ಯದಿಂದ ಸದ್ಗುರು ಕೃಪಾಪಾತ್ರರಾ
ಆತ್ಮಚಿಂತನದ ತತ್ವಸಾರವನ್ನು ಅಧ್ಯಯನ ಮಾಡಿ ಆದರ್ಶಪ್ರಜೆಗಳಾಗುವುದ
ಜೊತೆಗೆ ಭಾರತದ ಐಕ್ಯತೆಯನ್ನು ಕಾಪಾಡಿ ವಿಶ್ವದಲ್ಲಿ ಶಾಂತಿ, ಸುಖ, ಸ್ನೇಹ
ಸಂಮೃದ್ಧಿಗಳು ನೆಲಸಲಿಕ್ಕಾಗಿ ಯಥಾರ್ಥಜ್ಞಾನ ಸಂಪಾದನೆಯ ಸಾಧನೆಗಳೇ ನಿಜ
ವಾದ ಪ್ರಮಾಣಗಳೆಂದು ನಂಬಿ ನಡೆದರೆ ನಮ್ಮ ಹೊಂಗನಸೆಲ್ಲವೂ ನನಸಾದೀತು.

## ಅಂಗವಿಕಲರಿಗೊಂದು ಆಶಾಕಿರಣ

# ಮಾತಿನಿಂದ ಚಲಿಸುವ ಕಾರು

ಬಿ. ಸುಬ್ರಾಯಅಡಿಗ, ನಿವೃತ್ತ ಉಪಾಧ್ಯಾಯರು, ಸಂಡೂರು (ಬಳ್ಳಾರಿ ಜಿಲ್ಲೆ) 583119

ಬಲಕ್ಕೆ ತಿರುವು:- ಎಂದೊಡನೆಯೋ ಬಲಕ್ಕೂ ಎಡಕ್ಕೆ ತಿರುಗು ಎಂದಾಕ್ಷಣ ಎಡಕ್ಕೂ ತಿರುಗುವ ಕಾರನ್ನು ಕಂಡಿದ್ದೀರಾ ನೀವು? ಬಾಯಿಯ ಅಪ್ಪಣೆಯನ್ನಷ್ಟೇ ಪಾಲಿಸುವ ಕಾರು ಈಗ ಅಸ್ತಿತ್ವಕ್ಕೆ ಬಂದಿದೆ.

ಇದು ಪೌರಾಣಿಕಕತೆಯ ಆಧುಸಿಕ ಸಂಸ್ಕರಣವೋ ವೈಜ್ಞಾನಿಕ ಕಥೆಯೋ ಎಂದು ನೀವು ಯೋಚಿಸುತ್ತಿರಬಹುದು. ಆದರೆ ಇದು ವಾಸ್ತವಿಕ ವಿಷಯ.

ಭಾರತೀಯರ ಪಾಲಿಗೆ ಇದು ಬರೇ ಕಲ್ಪನೆ ಆಗಿರಬಹುದೆನ್ನಿ. ಏಕೆಂದರೆ ಇಲ್ಲಿ ಕಾರು ಹೊಂದಿರಲು ಜನಸಾಮಾನ್ಯರಿಗೆ ಸಾಧ್ಯವಿಲ್ಲ. ಕಾರುಗಳ ಬೆಲೆ ಬಹಳಷ್ಟು ಹೆಚ್ಚಿರುವುದರಿಂದ ಮಧ್ಯಮ ವರ್ಗದ ಜನ ಅದರ ಕನಸುಕೂಡ ಕಾಣಲಾರರು ಅಲ್ಲದೆ ಅದನ್ನು ಇಟ್ಟುಕೊಳ್ಳಲು ಸಾಕಷ್ಟು ಖರ್ಚು ತಗಲುವುದು.

ಆದರೆ ಅಮೇರಿಕೆಯಂತಹ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾರು ಸಂಚಾರದ ಸಾಮಾನ್ಯ ಸಾಧನ ಅಮೇರಿಕೆಯಲ್ಲಿ ಪ್ರತಿ ಮೂರು ಜನಕ್ಕೊಂದರಂತೆ ಕಾರಿದೆ. ಪ್ರತಿಪರಿವಾರದಲ್ಲಿ ಒಂದಾದರೂ ಕಾರು ಇದ್ದೇ ಇರುತ್ತದೆ. ಒಂದಕ್ಕಿಂತ ಹೆಚ್ಚು ಕಾರುಗಳಿರುವುದೂ ಅಲ್ಲಿ ವಿಶೇಷ ಸಂಗತಿಯಲ್ಲ. ಹೀಗಾಗಿ ಅಲ್ಲಿ ಪ್ರತಿವರುಷವೂ ಕಾರುಗಳ ಹೊಸ ಹೊಸ ಮಾದರಿ ತಯಾರಾಗುತ್ತದೆ. ಕಾರು ನಿರ್ಮಾಪಕ ಕಂಪೆನಿಗಳು ಅಂಗವಿಕಲ ರಿಗಾಗಿಯೂ ಹೊಸಮಾದರಿಯ ಕಾರು ತಯಾರಿಸುವ ಹವಣಿಕೆಯಲ್ಲಿವೆ. ಕೈಕಾಲು ಹಾಗು ದೇಹದ ಇತರ ಅಂಗಗಳು ಕೆಲಸಮಾಡದ ಜನರಿಗಾಗಿ ವಿಶಿಷ್ಟ ರೀತಿಯ ಕಾರು ಬೇಕಾದಿತಷ್ಟೆ?

ಇತ್ತೀಚೆಗೆ ಬ್ರಿಟನ್ನಿನ ವರ್ಕಶಾಯರ ನಗರದಲ್ಲಿ ವಿಕಲಾಂಗರಿಗಾಗಿ ತಯಾರಾದ ಗಾಡಿಗಳ ಉಪಕರಣಗಳನ್ನು ಪ್ರದರ್ಶಿಸಲಾಯಿತು. ಅದರಲ್ಲಿ ಬೇರೆ ಬೇರೆ ದೇಶಗಳ ನಿರ್ಮಾಪಕರು ತಮ್ಮ ತಮ್ಮ ಕಾರುಗಳನ್ನು ಉಪಕರಣಗಳನ್ನು ಪ್ರದರ್ಶಿಸಿದರು. ಬಾಗಿಲು ತೆರೆಯಲು ಮುಚ್ಚಲು ಹಾಗು ಇತರ ಕೆಲಸ ಮಾಡಲು ಗುಂಡಿ ಒತ್ತ ಬೇಕಷ್ಟೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇಂಥ ಕಾರುಗಳು ತುಂಬ ಉಪಯೋಗ ಎನಿಸ ಬಲ್ಲವು ಬೆಲೆಯ ದೃಷ್ಟಿಯಿಂದ ಇವು ದುಬಾರಿಯಾದರೂ ಅ ಜನ ಈ ಬಗ್ಗೆ ಚಿಂತಿ ಸುವುದಿಲ್ಲ.

ಬಾಯಿಮಾತಿನ ಅಪ್ಪಣೆಯಂತೆ ಕಾರು ನಡೆಯುವುದೆಂಬುದನ್ನು ಪಕ್ಕನೆ ಒಪ್ಪಲು ಕಷ್ಟ. ಆದರೆ ಪರೀಕ್ಷಣಗಳಿಂದ ಇದು ರುಜುವಾತಾಗಿರುವುದರಿಂದ ಒಪ್ಪಲೇ ಬೇಕಾಗುವುದು.

ವಿಕಲಾಂಗವ್ಯಕ್ತಿ ತನ್ನ ಮನೆಯಿಂದ ಸಣ್ಣ ಕುರ್ಚಿಯಂತಹ ಗಾಡಿಯ
ಕುಳಿತು ಹೊರಬರುವ-ಕೈ ಅಥವ ಬ್ಯಾಟರಿಯಿಂದ ನಡೆಯುವ ಮೂರುಗಾಲಿ
ಇಂಥ ಕುರ್ಚಿ ಭಾರತದಲ್ಲೂ ಕಾಣಸಿಗುವುದು. ಆದರೆ ಇಂಥ ಕುರ್ಚಿಯಿಂದ ಕಾ
ಸೀಡಿಗೆ ತಲುಪುವುದು ನಮ್ಮಲ್ಲಿ ಅಸಾಧ್ಯ.

ಆದರೆ ಪಾಶ್ಚಾತ್ಯ ರಾಷ್ಟ್ರಗಳ ನಿರ್ಮಾಪಕರು ಇದಕ್ಕೂ ತಕ್ಕ ಏರ್ಪಾಡು ಮಾ
ಡ್ದಾರೆ. ವಿಕಲಾಂಗ ವ್ಯಕ್ತಿ ಒಂದು ಗುಂಡಿ ಒತ್ತುತ್ತಲೇ ಕುರ್ಚಿಯ ಸೀಟು ಮೇ
ರುತ್ತದೆ. ಮತ್ತು ಕಾರಿನ ಬಾಗಿಲು ತಾನಾಗಿಯೇ ತೆರೆದುಕೊಂಡು ಆ ವ್ಯ
ಕಾರಿನ ಒಳಸೇರುವಂತಾಗುವುದು:

ಈಗ ಈ ಕುರ್ಚಿಯಂತಹ ಗಾಡಿಯನ್ನು ಆತ ಎಲ್ಲಿ ಬಿಡಬೇಕು, ಅದ
ಜತೆಗೆ ಒಯ್ಯಬೇಕಷ್ಟೆ ? ಅವನು ತನ್ನ ಗುರಿ ಮುಟ್ಟಿದ ಬಳಿಕ, ಕೆಳಗಿಳಿಯಲು ಅ
ಬೇಕಾಗುವುದು. ಇದಕ್ಕಾಗಿ ಬ್ರಿಟನ್ನಿನ ಚೇರ್‌ಆಪ್ ಲಿಮಿಟೆಡ್ ಎಂಬ ಸಂ
ಕಾರಿನಲ್ಲಿ ಇದಕ್ಕೂ ವ್ಯವಸ್ಥೆ ಮಾಡಿದೆ. ಒಂದು ಗುಂಡಿ ಒತ್ತುತ್ತಲೇ ಆ ಕುಱ
ಅಥವಾ ಸೈಕಲ್ ಕಾರಿನ ಮೇಲ್ಭಾಗಕ್ಕೆ ಹೋಗಿ ನಿಲ್ಲುತ್ತದೆ. ಅಗತ್ಯ ಬಂದಾ
ಗುಂಡಿ ಒತ್ತಿ ಅದನ್ನು ಮತ್ತೆರ ಸ್ತೆಯ ಮೇಲಿಳಿಸಬಹುದು. ಈ ಉಪಕರಣವನ್ನು ಎ
ಗಾಡಿಗಳಿಗೂ ಅಳವಡಿಸಬಹುದು. ಇದರ ಬೆಲೆ ಸುಮಾರು ೧೦ ಸಾವಿರ ರೂಪಾಂ
ಈ ಕಾರುಗಳಲ್ಲಿ ಅಂಗವಿಕಲರಿಗಾಗಿ ಅಳವಡಿಸಲಾದ ಸೀಟುಗಳನ್ನು ಅಗತ್ಯಕ್ಕೆ ತಕ್ಕಂ
ಎಡ ಬಲ ಹಾಗೂ ಮೇಲೆ ಕೆಳಗೆ ಮಾಡಲು ಸಾಧ್ಯವಿಲ್ಲ.

ಆದರೆ ಇಂಜಿನಿಯರ್ ಅತ್ಯದ್ಭುತ ಆವಿಷ್ಕಾರವೆಂದರೆ ಸ್ವರ ಚಾಲಿತ ಕಾರ
ಇದಕ್ಕಾಗಿ ಅತ್ಯಾಧುನಿಕ ಕಂಪ್ಯೂಟರ್ ಜೋಡಿಸಲಾಗಿದೆ 'ಕ್ಯಾಂಪ್" ಎಂ
ಪ್ಯಾರೀಸಿನ ಒಂದು ಕಂಪೆನಿ ಇದನ್ನು ರೂಪಿಸಿದೆ. ಕಂಪೆನಿಯ ಒಬ್ಬ ವಕ್ತಾ
ಪ್ರಕಾರ, ಅಂಗವಿಕಲರಿಗಾಗಿ ಅದು ೧೯೫೫ ರಿಂದಲೂ ಕೆಲಸ ಮಾಡುತ್ತದೆ ಕೈ
ಲುಗಳಿಲ್ಲದ ವ್ಯಕ್ತಿಗಳಿಗಾಗಿಯೇ ಈ ಸ್ವರಚಾಲಿತ ಕಾರುಗಳನ್ನು ನಿರ್ಮಿಸಲಾಯಿತು

ಇನ್ನೂ ಪ್ರಯೋಗ ಮುಗಿದಿಲ್ಲ. ಅದನ್ನು ಇನ್ನಷ್ಟು ಪರಿಷ್ಕರಿಸಿ ಹೆಚ್ಚಿನ ಸೌಕ
ಒದಗಿಸುವ ಪ್ರಯತ್ನ ನಡೆದಿದೆ. ಈ ಕಂಪ್ಯೂಟರ್‌ದಿಂದ ಎಡಕ್ಕೆ ಅಥವಾ ಬಲ
ತಿರುಗಲು ಅಪ್ಪಣೆ ಕೊಡಬಹುದು. ಮಳೆ ಬಂದಾಗ ಎದುರಿನ ಗಾಜಿನ ಮೇಲಿ
ಮಳೆ ಹನಿಗಳನ್ನು ಸ್ವಚ್ಛಪಡಿಸಲು ಬಾಯ್ದೆರೆ ಅಪ್ಪಣೆ ಕೊಡಬಹುದು. ಈ ಎ
ಕಾರ್ಯಗಳು ತಾವಾಗಿಯೇ ನಡೆಯುವವು. ಕ್ಯಾಂಪ್ ಕಂಪೆನಿ ಪ್ರತಿವರ
ಸುಮಾರು ೪೫೦೦ ಕಾರುಗಳಿಗೆ ವಿಭಿನ್ನ ಉಪಕರಣಗಳನ್ನು ಜೋಡಿಸಿ ಸಜ್ಜುಗೊ
ಸುತ್ತದೆ. ಅತಿ ಹೆಚ್ಚು ಜನಪ್ರಿಯ ಉಪಕರಣವೆಂದರೆ ತಾನಾಗಿಯೇ ಸರಿಯು
ಹಿಂದಿನ ಬಾಗಿಲು.

ತಾನಿರುವ ಕುರ್ಚಿಯಿಂದ ಸಾಮಾನ್ಯ ಕಾರುಗಳ ಬಾಗಿಲು ತೆರೆಯಲು ಅಂಗ-
ಕಲರಿಗೆ ತುಂಬಾ ಕಷ್ಟವೆನಿಸುವುದು. ಇದನ್ನು ಗಮನಿಸಿದ ಕಂಪೆನಿ ಗುಂಡಿ ಮುಚ್ಚಿದ
ೊಡಲೇ ಒಂದೆಡೆ ಸರಿಯುವ ಬಾಗಿಲನ್ನು ತಯಾರು ಮಾಡಿದೆ. ಆಗ ಆ ವ್ಯಕ್ತಿಗೆ
ರ್ಚಿಯಿಂದ ಕಾರಿಗೆ ಹೋಗಿ ಕುಳಿತುಕೊಳ್ಳಲು ಅನುಕೂಲವಾಗುವುದು.

ಕಾಲಿಲ್ಲದ ವ್ಯಕ್ತಿಗಳು ಕೈಯಿಂದಲೇ ಕೆಲಸ ಮಾಡಲು ಅನುಕೂಲಿಸುವಂತೆ
ಕ್ಸಲೇಟರ್, ಬ್ರೇಕ್ ಮೊದಲಾದ ಉಪಕಕರಣಗಳನ್ನು ಇಂಥ ಕಾರುಗಳಲ್ಲಿ ಕೈ-
ುಂದಲೇ ಬಳಸುವಂತಹ ವಿಶಿಷ್ಟ ಏರ್ಪಾಡಿದೆ.

ಒಂದೇ ತೋಳು ಇರುವ ಜನಕ್ಕೆ ಅನುಕೂಲವಾಗುವಂತೆ ಅಗತ್ಯದ ಉಪ-
ರಣಗಳನ್ನು ಒಂದೇ ಒದಿಯಲ್ಲಿ ಅಳವಡಿಸಿದ್ದ ಕಾರುಗಳೂ ಇವೆ. ಅಂಗವಿಕಲರು
ರ್ಚಿ ಸಹಿತ ಕಾರಿನೊಳಗೆ ಹೋಗುವಂತಹ ಇಳಿಜಾರು ಮಾರ್ಗವನ್ನು ಬ್ರಿಟನ್ನಿನ
ಂಪೆನಿಯೊಂದು ಕಾರಿಗೆ ಅಳವಡಿಸಿದೆ. ಹೊರ ಬರುವಾಗ ಅವರು ಕುರ್ಚಿ ಸಹಿತ
ೊರ ಬರಬಲ್ಲರು. ಬ್ರಿಟನ್ನಿನಲ್ಲಿ ಈ ಉಪಕರಣದ ಬೆಲೆ ೩೨ಸಾವಿರ ರೂಪಾಯಿ.

ನಿಜಕ್ಕೂ ಇದು ತುಂಬಾ ದುಬಾರಿ ಉಪಕರಣ. ಬ್ರಿಟನ್ನಿನ ಎವರೆಸ್ಟ್ ಅ್ಯಂಡ್
ೆನಿಂಗ್ಸ್ ಎಂಬ ಇನ್ನೊಂದು ಸಂಸ್ಥೆ ಕಾರ್ ಟಾಪ್ ಲಿಫ್ಟರ್ ಎಂಬ ಇನ್ನೊಂದು
ುಪಕರಣ ನಿರ್ಮಿಸಿದ್ದು ಅದರ ಬೆಲೆ ಬರೇ ೪೫೦೦ ರೂಪಾಯಿ. ಈ ಉಪಕರಣದ
ೆರವಿನಿಂದ ಅಂಗವಿಕಲನನ್ನು ಅವನ ಕುರ್ಚಿಯಿಂದ ಮೇಲಕ್ಕೆತ್ತಿ ಕಾರಿನ ಮಾಡಿಗೆ
ಯ್ಯಲಾಗುತ್ತದೆ. ಮತ್ತೆ ಅಲ್ಲಿಂದ ಕಾರಿನೊಳಗೆ ಸೀಟಿನ ಮೇಲೆ ಇಳಿಸಲಾಗುತ್ತದೆ.

ಮನೆಯೊಳಗೂ ಅತ್ತಿತ್ತ ತಿರುಗಾಡಲು ಬ್ರಿಟನಿನ ಕಾರ್ಟರ್ಜ್ ಕಂಪೆನಿ ಯಂತ್ರ
ಾಲಿತ ಕುರ್ಚಿಯನ್ನು ತಯಾರಿಸಿದೆ. ಅದನ್ನು ಮನ ಬಂದಂತೆ ಅಚೀಚೆ ತಿರುಗಿಸ
ಹುದು. ಅದನ್ನು ಹಿಂದಕ್ಕೂ ಮುಂದಕ್ಕೂ ಒಯ್ಯಬಹುದು.

ಅಲ್ಪ ಸ್ವಲ್ಪ ಕೈಕಾಲು ಬಳಸುವವರಿಗಾಗಿ ಹೊಂಡಾ ಕಂಪೆನಿ ಮೂರು ಗಾಲಿಗಳ
ಔಟ್‌ರೈಡರ್' ಕುರ್ಚಿ ನಿರ್ಮಿಸಿದೆ. ಪೆಟ್ರೋಲಿನಿಂದ ನಡೆಯುವ ಈ ಕುರ್ಚಿ ರಸ್ತೆ
ುಲ್ಲಷ್ಟೇ ಅಲ್ಲ ಕಂಬಿಯ ಮೇಲೂ ಸಾಗಬಲ್ಲದು. ಇದರ ಬೆಲೆ ಸುಮಾರು ೧೫
ಾವಿರ ರೂಪಾಯಿ.

ಭಾರತದಲ್ಲಿ ಅಂಗವಿಕಲರಿಗಾಗಿ ಹಲವಾರು ಯೋಜನೆಗಳನ್ನು ಹಮ್ಮಿಕೊಳ್ಳ-
ಲಾಗಿದೆ ಅಂಗವಿಕಲರ ವರ್ಷವನ್ನು ಆಚರಿಸಲಾಗಿದೆ. ಕಡಿಮೆ ವೆಚ್ಚದಲ್ಲಿ ಅವರಿಗೆ
ಅನುಕೂಲವಾಗುವಂತಹ ಇಂಥ ಉಪಕರಣಗಳನ್ನು ನಮ್ಮವರೂ ತಯಾರಿಸುವರೆಂದು
ಿರೀಕ್ಷಿಸೋಣವೆ ?

(ಹಿಂದಿಯಿಂದ)

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತವೆ.

**ಹೋಟೆಲ್**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.
ದೂರವಾಣಿ
8597, 2373, 2577







**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು.
ದೂರವಾಣಿ : 8077



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.
ದೂರವಾಣಿ : 2677

**ಸಿ.ವಿ. ಮಹದೇವಯ್ಯ**

**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.
ದೂರವಾಣಿ : 2077